# ಹರಿಕಥಾಮೃತಸಾರವು





ಶ್ರೀ ಮನ್ಮಧ್ವಸಿದ್ಧಾಂತಗ್ರಂಥಾಲಯ
ಉಡುಪಿ

॥ श्रीः ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

ಉಡುಪಿ.

ಶ್ರೀಮಜ್ಜಗನ್ನಾಥದಾಸರಾಯರಿಂದ

ವಿರಚಿತವಾದ

# ಹರಿಕಥಾಮೃತಸಾರವು.



ತೃತೀಯ ಮುದ್ರಣ

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1925.

ಕ್ರಯ: ೧೨ ಆಣೆ.

# ಅನುಕ್ರಮಣಿಕಾ.

## ಅನುಕ್ರಮಣಿಕಾ ಸಮಾಪ್ತಾ.

☞ ಸೂಚನೆ [illegible] ಪುಸ್ತಕಗಳಲ್ಲಿ [illegible] ಒಂದು ಸಂಧಿಗೂ [illegible] ಪುಸ್ತಕದ [illegible] ನುಸಾರವಾಗಿ ಸಂಧಿಕ್ರಮವನ್ನು [illegible]

ಶ್ರೀಃ

# ಹರಿಕಥಾಮೃತಸಾರವು.

## ನಾಂದೀಶ್ಲೋಕಗಳು.

॥ ಶ್ರೀಗುರುಭ್ಯೋ ನಮಃ ॥

ರಾಗ ನಾಟಿ.

**॥ ಹರಿಃ ಓಮ್ ॥**

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ೧ ॥
ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ॥ ೨ ॥
ಯೋ ವಿಪ್ರಲಂಭವಿಪರೀತಮತಿಪ್ರಭೂತ-
ವಾದಾನ್ನಿರಸ್ಯ ಕೃತವಾನ್ಭುವಿ ತತ್ವವಾದಮ್ ।
ಸರ್ವೇಶ್ವರೋ ಹರಿರಿತಿ ಪ್ರತಿಪಾದಯಂತ-
ಮಾನಂದತೀರ್ಥಮುನಿವರ್ಯಮಹಂ ನಮಾಮಿ ॥ ೩ ॥
ಆಪಾದಮೌಲಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿಧ್ಯಂತಿ ಚ ಮನೋರಥಾಃ ॥ ೪ ॥
ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ।
ವೈಷ್ಣವಾ ವಿಷ್ಣುಹೃದಯಾಸ್ತಾನ್ನಮಸ್ಯೇ ಗುರೂನ್ಮಮ ॥ ೫ ॥
ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥ ೬ ॥
ಮನ್ಮನೋಽಭೀಷ್ಟವರದಂ ಸರ್ವಾಭೀಷ್ಟಫಲಪ್ರದಮ್ ।
ಪುರಂದರಗುರುಂ ವಂದೇ ದಾಸಶ್ರೇಷ್ಠಂ ದಯಾನಿಧಿಮ್ ॥ ೭ ॥

ಅಜ್ಞಾನತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಮ್ ।
ವಿಜ್ಞಾನವಿಮಲಂ ಶಾಂತಂ ವಿಜಯಾಖ್ಯಗುರುಂ ಭಜೇ ॥ ೮ ॥
ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥ ೯ ॥

## ೧. ಮಂಗಳಾಚರಣಸಂಧಿ.

ಗ್ರಂಥಕರ್ತರಾದ ಶ್ರೀಜಗನ್ನಾಥದಾಸರಾಯರು ಈ ಸಂಧಿಯಲ್ಲಿ ತಾವು ರಚಿಸಬೇಕೆಂದು ಸಂಕಲ್ಪಿಸಿದ ಗ್ರಂಥವು ನಿರ್ವಿಘ್ನದಿಂದ ಪರಿಸಮಾಪ್ತಿಯಾಗಬೇಕಾಗಿ ಶ್ರೀಪರಮಾತ್ಮನನ್ನೂ, ವಿಷ್ಣುಭಕ್ತರಾದ ರಮಾಬ್ರಹ್ಮಾದಿ ಸಕಲ ದೇವತೆಗಳನ್ನೂ, ಪದ್ಮನಾಭತೀರ್ಥರೇ ಮೊದಲಾದ ಗುರುಗಳನ್ನೂ ಶಿಷ್ಟಾಚಾರಸಂಪ್ರದಾಯಪ್ರಕಾರ ಪ್ರಾರ್ಥಿಸುತ್ತಾರೆ

॥ ಶ್ರೀಲಕ್ಷ್ಮೀನೃಸಿಂಹಾಯ ನಮಃ ॥

**(ಭಾಮಿನಿಷಟ್ಪದಿ.)**

ರಾಗ ನಾಟಿ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀರಮಣಿಕರಕಮಲಪೂಜಿತ । ಚಾರುಚರಣಸರೋಜ ಬ್ರಹ್ಮಸ- । ಮೀರ ವಾಣಿಫಣೀಂದ್ರವೀಂದ್ರಭವೇಂದ್ರಮುಖವಿನುತಾ ॥ ನೀರಜಭವಾಂಡೋದಯಸ್ಥಿತಿ । ಕಾರಣನೆ ಕೈವಲ್ಯದಾಯಕ । ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವಾ ॥ ೧ ॥

ಜಗದುದರನತಿವಿಮಲಗುಣರೂ- । ಪಗಳನಾಲೋಚನದಿ ಭಾರತ । ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳಾ ॥ ಬಗೆಬಗೆಯ ನೂತನವ ಕಾಣುತ । ಮಿಗೆ ಹರುಷದಿಂ ಪೊಗಳಿ ಹಿಗ್ಗುವ । ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವೂ ॥ ೨ ॥

ನಿರುಪಮಾನಂದಾತ್ಮಭವ ನಿ- । ರ್ಜರಸಭಾಸಂಸೇವ್ಯ ಋಜು
ಗಣ- । ದರಸೆ ಸತ್ವಪ್ರಚುರ ವಾಣೀಮುಖಸರೋಜೇನಾ ॥ ಗರುಡಶೇಷ
ಶಶಾಂಕದಳಶೇ- । ಖರರ ಜನಕ ಜಗದ್ಗುರುವೆ ತ್ವ- । ಚ್ಚರಣಗಳಿಗಭಿ
ವಂದಿಸುವೆ ಪಾಲಿಪುದು ಸನ್ಮತಿಯಾ ॥ ೩ ॥

ಆರುಮೂರೆರಡೊಂದು ಸಾವಿರ । ಮೂರೆರಡು ಶತಶ್ವಾಸ ಜಪ
ಗಳ । ಮೂರುವಿಧ ಜೀವರೊಳಗಬ್ಜಜಕಲ್ಪಪರಿಯಂತಾ ॥ ತಾ ರಚಿಸಿ
ಸಾತ್ವರಿಗೆ ಸುಖ ಸಂ- । ಸಾರ ಮಿಶ್ರರಿಗಧಮ ಜನರಿಗ- । ಪಾರದುಃಖಗ
ಳೀವ ಗುರುಪವಮಾನ ಸಲಹೆಮ್ಮಾ ॥ ೪ ॥

ಚತುರವದನನ ರಾಣಿಯುತಿರೋ- । ಹಿತವಿಮಲವಿಜ್ಞಾನಿ ನಿಗಮ ।
ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣೀ ॥ ನತಿಸಿ ಬೇಡುವೆ ಜನನಿ
ಲಕ್ಷ್ಮೀ । ಪತಿಯ ಗುಣಗಳ ತುತಿಪುದಕೆ ಸ- । ನ್ಮತಿಯ ಪಾಲಿಸಿ ನೆಲಸು
ನೀ ಮದ್ವದನಸದನದಲೀ ॥ ೫ ॥

ಕೃತಿರಮಣಪ್ರದ್ಯುಮ್ನನಂದನೆ । ಚತುರವಿಂಶತಿತತ್ವಪತಿ ದೇ- ।
ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನೀ ॥ ಸತತ ಹರಿಯಲಿ
ಗುರುಗಳಲಿ ಸ- । ದ್ರತಿಯ ಪಾಲಿಸಿ ಭಾಗವತ ಭಾ- । ರತಪುರಾಣರಹಸ್ಯ
ತತ್ವಗಳರುಪು ಕರುಣದಲೀ ॥ ೬ ॥

ವೇದಪೀಠ ವಿರಿಂಚಿಭವಶ- । ಕ್ರಾದಿಸುರವಿಜ್ಞಾನದಾಯಕ ।
ಮೋದಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರಾ ॥ ಛೇದಭೇದವಿಷಾದ
ಕುಟಿಲಾಂ- । ತಾದಿಮಧ್ಯವಿದೂರ ಆದಾ- । ನಾದಿಕಾರಣ ಬಾದರಾಯಣ
ಪಾಹಿ ಸತ್ರಾಣಾ ॥ ೭ ॥

ಕ್ಷಿತಿಯೊಳಗೆ ಮಣಿಮಂತ ಮೊದಲಾ- । ದತಿದುರಾತ್ಮರು ಒಂದ
ಧಿಕ ವಿಂ- । ಶತಿ ಕುಭಾಷ್ಯವ ರಚಿಸೆ ನಡುಮನೆಯೆಂಬ ಬ್ರಾಹ್ಮಣನಾ ॥
ಸತಿಯ ಜಠರದೊಳವತರಿಸಿ ಭಾ- । ರತಿರಮಣ ಮಧ್ವಾಭಿಧಾನದಿ ।
ಚತುರದಶಲೋಕದಲಿ ಮೆರೆದಪ್ರತಿಮಗೊಂದಿಸುವೇ ॥ ೮ ॥

ಪಂಚಭೇದಾತ್ಮಕ ಪ್ರಪಂಚಕೆ । ಪಂಚರೂಪಾತ್ಮಕನೆ ದೈವಕ । ಪಂಚಮುಖಶಕ್ರಾದಿಗಳು ಕಿಂಕರರು ಶ್ರೀಹರಿಗೇ ॥ ಪಂಚವಿಂಶತಿ ತತ್ವ ತರತಮ । ಪಂಚಿಕೆಗಳಂ ಪೇಳ್ದ ಭಾವಿ ವಿ- । ರಿಂಚಿಯೆನಿಪಾನಂದತೀರ್ಥರ ನೆನೆವೆನನುದಿನವೂ ॥ ೯ ॥

ವಾಮದೇವ ವಿರಿಂಚತನಯ ಉ- । ಮಾಮನೋಹರ ಉಗ್ರ ಧೂರ್ಜಟಿ । ಸಾಮಜಾಜಿನವಸನಭೂಷಣ ಸುಮನಸೋತ್ತಂಸಾ ॥ ಕಾಮಹರ ಕೈಲಾಸಮಂದಿರ । ಸೋಮಸೂರ್ಯಾನಳವಿಲೋಚನ । ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವಾ ॥ ೧೦ ॥

ಕೃತ್ತಿವಾಸನೆ ಹಿಂದೆ ನೀ ಸಾ- । ಲ್ವತ್ತು ಕಲ್ಪ ಸಮೀರನಲಿ ಶಿ- । ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳೂ ॥ ಹತ್ತು ಕಲ್ಪದಿ ತಪವಗೈದಾ- । ದಿತ್ಯರೊಳಗುತ್ತಮನೆನಿಸಿ ಪುರು- । ಷೋತ್ತಮನ ಪರಿಯಂಕಪದವೈದಿದೆಯೊ ಮಹದೇವಾ ॥ ೧೧ ॥

ಪಾಕಶಾಸನಮುಖ್ಯಸಕಲದಿ- । ವೌಕಸರಿಗಭಿನಮಿಪೆ ಋಷಿಗಳಿ- । ಗೇಕಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥ ಆ ಕಮಲನಾಭಾದಿ ಯತಿಗಳ- । ನೀಕಕಾನಮಿಸುವೆನು ಬಿಡದೆ ರ- । ಮಾಕಳತ್ರನ ದಾಸವರ್ಗಕೆ ನಮಿಪೆನನವರತಾ ॥ ೧೨ ॥

ಪರಿಮಳವು ಸುಮನದೊಳಗನಳನು । ಅರಣಿಯೊಳಗಿಪ್ಪಂತೆ ದಾಮೋ- । ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೇ ॥ ಇರುತಿಹ ಜಗನ್ನಾಥವಿಠಲನ । ಕರುಣ ಪಡೆವ ಮುಮುಕ್ಷುಜೀವರು । ಪರಮಭಾಗವತರನು ಕೊಂಡಾಡುವುದು ಪ್ರತಿದಿನವೂ ॥ ೧೩ ॥

ಅಂತು ಶ್ರೀಮಜ್ಜಗನ್ನಾಥದಾಸರಾಜವಿರಚಿತ ಶ್ರೀಹರಿಕಥಾಮೃತಸಾರದಲ್ಲಿ ಸಂಧಿ ಒಂದಕ್ಕೆ ಪದ ಹದಿಮೂರಕ್ಕೆ ಮಂಗಳಾಚರಣಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೨. ಕರುಣಾಸಂಧಿ.

ಇದರಲ್ಲಿ ಭಗವತ್ಸಂಬಂಧಿ ಸತ್ಕತ್ತ್ವಶ್ರವಣದಿಂದಲೇ ಶ್ರೀಶ ಕೃಪೆಮಾಡಿ ಸಜ್ಜನರಿಗೆ ಒಲಿವನೆಂತೆಂದು ಪರಮಾತ್ಮನ ದಯಾರಸವನ್ನು ವಿವರಿಸುತ್ತಾರೆ.

॥ ಶ್ರೀಹರಯೇ ನಮಃ ॥

ರಾಗ ಸಾರಂಗ, ಏಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರವಣಮನಕಾನಂದವೀವುದು । ಭವಜನಿತದುಃಖಗಳ ಕಳೆವುದು । ವಿವಿಧಭೋಗಗಳಿಹಪರಂಗಳಲಿತ್ತು ಸಲಹುವುದೂ ॥ ಭುವನಪಾವನನೆನಿಪ ಲಕ್ಷ್ಮೀ । ಧವನ ಮಂಗಳಕಥೆಯ ಪರಮೋ- । ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದೀ ॥ ೧ ॥

ಮಳೆಯು ನೀರೋಣಿಯೊಳು ಪರಿಯಲು । ಬಳಸರೂರೊಳಗಿದ್ದ ಜನರಾ । ಜಲವು ಹೆದ್ದೊರೆಗೂಡೆ ಮಜ್ಜನಪಾನ ಗೈದಪರೂ ॥ ಕಲುಷವಚನಗಳಾದಡೆಯು ಬಾಂ- । ಬೊಳೆಯ ಪೆತ್ತನ ಪಾದಮಹಿಮಾ । ಜಲಧಿ ಪೊಕ್ಕದರಿಂದ್ದ ಮಾಣ್ದಪರೇ ಮಹೀಸುರರೂ ॥ ೨ ॥

ಶ್ರುತಿತತಿಗಳಭಿಮಾನಿ ಲಕ್ಷ್ಮೀ । ಸ್ತುತಿಗಳಿಗೆ ಗೋಚರಿಸದಪ್ರತಿ- । ಹತಮಹೈಶ್ವರ್ಯಾದ್ಯಖಿಳಸದ್ಗುಣಗಣಾಂಭೋಧಿ ॥ ಪ್ರತಿದಿವಸ ತನ್ನಂಘ್ರಿಸೇವಾ- । ರತಮಹಾತ್ಮರು ಮಾಡುತಿಹ ಸಂ- । ಸ್ತುತಿಗೆ ವಶನಾಗುವ ನಿವನ ಕಾರುಣ್ಯಕೇನೆಂಬೇ ॥ ೩ ॥

ಮನವಚನಕತಿದೂರ ನೆನೆವರ- । ನನುಸರಿಸಿ ತಿರುಗುವನು ಜಾಹ್ನವಿ । ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನೂ ॥ ಘನಮಹಿಮ ಗಾಂಗೇಯನುತ ಗಾ- । ಯನವ ಕೇಳುತ ಗಗನಚರವಾ- । ಹನ ದಿವೌಕಸರೊಡನೆ ಚರಿಸುವ ಮನೆಮನೆಗಳಲ್ಲೀ ॥ ೪ ॥

ಮಲಗಿ ಪರಮಾದರದಿ ಪಾಡಲು । ಕುಳಿತು ಕೇಳುವ ಕುಳಿತು ಪಾಡಲು । ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬಾ ॥ ಸುಲಭನೋ ಹರಿ ತನ್ನವರನರೆ- । ಘಳಿಗೆ ಬಿಟ್ಟಗಲನು ರಮಾಧವ-। ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೇ ॥ ೫ ॥

ಮನದೊಳಗೆ ತಾನಿಪ್ಪ ಮನವೆಂ- । ದೆನಿಸಿಕೊಂಬನು ಮನದ ವೃತ್ತಿಗ- । ಳನುಸರಿಸಿ ಭೋಗಗಳನೀವನು ತ್ರಿವಿಧಚೇತನಕೇ ॥ ಮನವನಿತ್ತರೆ ತನ್ನನೀವನು । ತನುವ ದಂಡಿಸಿ ದಿನದಿನದಿ ಸಾ- । ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿಭೋಗಗಳಾ ॥ ೬ ॥

ಪರಮಸತ್ಪುರುಷಾರ್ಥರೂಪನು । ಹರಿಯು ಲೋಕಕೆ ಯೆಂದು ಪರಮಾ- । ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನಾ ॥ ಮರೆದು ಧರ್ಮಾರ್ಥಗಳ ಕಾಮಿಸು- । ವರಿಗೆ ನಗುತತಿಶೀಘ್ರದಿಂದಲಿ । ಸುರಪ ತನಯಸುಯೋಧನರಿಗಿತ್ತಂತೆ ಕೊಡುತಿಪ್ಪಾ ॥ ೭ ॥

ಜಗವನೆಲ್ಲವ ನಿರ್ಮಿಸುವ ನಾ- । ಲ್ಮೊಗನೊಳಗೆ ತಾನಿದ್ದು ಸಲಹುವ । ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳಾ ॥ ಸ್ವಗತ ಭೇದವಿವರ್ಜಿತನು ಸ- । ರ್ವಗ ಸದಾನಂದೈಕದೇಹನು । ಬಗೆಬಗೆಯ ನಾಮದಲಿ ಕರೆಸುವ ಭಕತರನು ಪೊರೆವಾ ॥ ೮ ॥

ಒಬ್ಬನಲಿ ನಿಂದಾಡುವನು ಮ- । ತ್ತೊಬ್ಬನಲಿ ನೋಡುವನು ಬೇಡುವ- । ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗೀ ॥ ಆಬ್ಬರದ ಹೆದ್ದೈವನಿವ ಮ- । ತ್ತೊಬ್ಬರನೆ ಲೆಕ್ಕಿಸನು ಲೋಕದೊ- । ಳೊಬ್ಬನೇ ತಾ ಬಾಧ್ಯಬಾಧಕನಾಗಿ ನಿರ್ಭೀತ ॥ ೯ ॥

ಶರಣಜನಮಂದಾರ ಶಾಶ್ವತ । ಕರುಣಿ ಕಮಲಾಕಾಂತ ಕಾಮದ । ಪರಮಪಾವನತರ ಸುಮಂಗಳಚರಿತ ಪಾರ್ಥಸಖಾ ॥ ನಿರುಪಮಾನಂದಾತ್ಮ ನಿರ್ಗತ । ದುರಿತ ದೇವವರೇಣ್ಯನೆಂದಾ- । ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ ॥ ೧೦ ॥

ಜನನಿಯನು ಕಾಣದಿಹ ಬಾಲಕ । ನೆನೆದು ಹಂಬಲಿಸುತಿರೆ ಕತ್ತಲೆ । ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ ॥ ತನಯನಂ ಬಿಗಿದಪ್ಪಿ ರಂಬಿಸಿ । ಕನಲಿಕೆಯ ಕಳೆವಂತೆ ಮಧುಸೂ- । ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ॥ ೧೧ ॥

ಇಟ್ಟಿಕಲ್ಲನು ಭಕುತಿಯಿಂದಲಿ । ಕೊಟ್ಟ ಭಕುತಗೆ ಮೆಚ್ಚಿ ತನ್ನನೆ । ಕೊಟ್ಟ ಬಡಬ್ರಾಹ್ಮಣನ ಪಿಡಿಯವಲಕ್ಕಿಗಖಿಳಾರ್ಥ । ಕೆಟ್ಟಮಾತುಗಳಿಂದ ಚೈದ್ಯನ । ಪೊಟ್ಟೆಯೊಳಗಿಂಬಿಟ್ಟ ಬಾಣಪ- । ಲಿಟ್ಟ ಭೀಷ್ಮನವ ಗುಣಗಳನೆಣಿಸಿದನೆ ಕರುಣಾಳು ॥ ೧೨ ॥

ಧನವ ಸಂರಕ್ಷಿಸುವ ಫಣಿ ತಾ- । ನುಣದೆ ಮತ್ತೊಬ್ಬರಿಗೆ ಕೊಡದನು- । ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು ॥ ಪ್ರಣತರನು ಕಾಯ್ದಿಹನು ನಿಷ್ಕಾ- । ಮನದಿ ನಿತ್ಯಾನಂದಮಯ ದು- । ರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ ॥ ೧೩ ॥

ಬಾಲಕನ ಕಲಭಾಷೆ ಜನನಿಯು । ಕೇಳಿ ಸುಖಬಡುವಂತೆ ಲಕ್ಷ್ಮೀ । ಲೋಲ ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು ॥ ತಾಳ ತನ್ನವರಲ್ಲಿ ಮಾಡುವ । ಹೇಳನವ ಹೆದ್ದೈವ ವಿದುರನ । ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ॥ ೧೪ ॥

ಸ್ಮರಿಸುವವರಪರಾಧಗಳ ತಾ । ಸ್ಮರಿಸ ಸಕಲೇಷ್ಟಪ್ರದಾಯಕ । ಮುರಳಿ ತನಗರ್ಪಿಸಲು ಕೊಟ್ಟುದನಂತಮಡಿ ಮಾಡಿ ॥ ಪರಿಪರಿಯಲಿಂದುಣಿಸಿ ಸುಖಸಾ- । ಗರದಿ ಲೋಲಾಡಿಸುವ ಮಂಗಳ- । ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ॥ ೧೫ ॥

ಏನು ಕರುಣಾನಿಧಿಯೊ! ಹರಿ ಮ- । ತ್ತೇನು ಭಕ್ತಾಧೀನನೋ! ಯಿ- । ನ್ನೇನು ಈತನ ಲೀಲೆ! ಇಚ್ಛಾಮಾತ್ರದಲಿ ಜಗವ ॥ ತಾನೆ ಸೃಜಿಸುವ ಪಾಲಿಸುವ ನಿ- । ರ್ವಾಣ ಮೊದಲಾದಖಿಳಲೋಕ- । ಸ್ಥಾನದಲಿ ಮತ್ತವರನಿಟ್ಟಾನಂದಬಡಿಸುವನು ॥ ೧೬ ॥

ಜನಪ ಮೆಚ್ಚಿದರೀವ ಧನವಾ- । ಹನವಿಭೂಷಣವಸನಭೂಮಿಯು । ತನುಮನವನಿತ್ತಾದರಿಪರುಂಟೇನೊ ಲೋಕದೊಳು ॥ ಅನವರತ ನೆನೆವವರನಂತಾ- । ಸನವೆ ಮೊದಲಾದಾಲಯದೊಳಿ- । ಟ್ಟಣುಗನಂದದಲವರ ವಶನಾಗುವ ಮಹಾಮಹಿಮಾ ॥ ೧೭ ॥

ಭುವನಪಾವನಚರಿತ ಪುಣ್ಯಾ । ಶ್ರವಣಕೀರ್ತನ ಪಾಪನಾಶನ । ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮಾ ॥ ಯುವತಿವೇಷದಿ ಹಿಂದೆ ಗೌರೀ । ಧವನ ಮೋಹಿಸಿ ಕೆಡಿಸಿ ಉಳಿಸಿದ । ಇವನ ಮಾಯವ ಗೆಲುವನಾವನು ಈ ಜಗತ್ರಯದೀ ॥ ೧೮ ॥

ಪಾಪಕರ್ಮವ ಸಹಿಸುವರೆ ಲ- । ಕ್ಷ್ಮೀಪತಿಗೆ ಸಮರಾದ ದಿವಿಜರ- । ನೀ ಪಯೋಜಭವಾಂಡದೊಳಗಾವಲ್ಲಿ ನಾ ಕಾಣೆ ॥ ಗೋಪಗುರುವಿನ ಮಡದಿ ಭೃಗು ನಗ- । ಚಾಪ ಮೊದಲಾದವರು ಮಾಳ್ದ- ಮ- । ಹಾಪರಾಧಗಳೆಣಿಸಿದನೆ ಕರುಣಾಸಮುದ್ರ ಹರೀ ॥ ೧೯ ॥

ಅಂಗುಟಾಗ್ರದಿ ಜನಿಸಿದಮರತ- । ರಂಗಿಣಿಯು ಲೋಕತ್ರಯಗಳಘ । ಹಿಂಗಿಸುವಳವ್ಯಾಕೃತಾಕಾಶಾಂತವ್ಯಾಪಿಸಿದಾ ॥ ಇಂಗಡಲ ಮಗಳೊಡೆಯನಂಗೋ- । ಪಾಂಗಗಳಲಿಪ್ಪಮಲನಂತ ಸು- । ಮಂಗಳಪ್ರದ ನಾಮ ಪಾವನ ಮಾಳ್ಪುದೇನರಿದೂ ॥ ೨೦ ॥

ಕಾಮಧೇನುಸುಕಲ್ಪತರುಚಿಂ- । ತಾಮಣಿಗಳಮರೇಂದ್ರಲೋಕದಿ । ಕಾಮಿತಾರ್ಥಗಳೀವವಲ್ಲದೆ ಸೇವೆ ಮಾಳ್ಪರಿಗೆ ॥ ಶ್ರೀಮುಕುಂದನ ಪರಮ ಮಂಗಳ । ನಾಮ ನರಕಸ್ಥರನು ಸಲಹಿತು । ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ॥ ೨೧ ॥

ಮನದೊಳಗೆ ಸುಂದರಪದಾರ್ಥವ । ನೆನೆದುಕೊಡೆ ಕೈಕೊಂಡುಬಲು ನೂ- । ತನಸುಶೋಭಿತಗಂಧಸುರಸೋಪೇತಫಲರಾಶೀ ॥ ದ್ಯುನದಿನಿವಹಗಳಂತೆ ಕೊಟ್ಟವ- । ರನು ಸದಾ ಸಂತೈಸುವನು ಸ- । ದ್ಗುಣವಕದ್ದವರಘವ ಕದಿಯುವನನಘನೆಂದೆನಿಸಿ ॥ ೨೨ ॥

ಚೇತನಾಚೇತನವಿಲಕ್ಷಣ । ನೂತನಪದಾರ್ಥಗಳೊಳಗೆ ಬಲು । ನೂತನತಿಸುಂದರಕೆ ಸುಂದರ ರಸಕೆ ರಸರೂಪಾ ॥ ಜಾತರೂಪೋದರ ಭವಾದ್ಯರೊ- । ಳಾತತಪ್ರತಿಮಪ್ರಭಾವ ಧ- । ರಾತಳದೊಳೆಮ್ಮೊಡನೆ ಯಾಡುತಲಿಪ್ಪ ನಮ್ಮಪ್ಪ ॥ ೨೩ ॥

ತಂದೆತಾಯ್ಗಳು ತಮ್ಮ ಶಿಶುವಿಗೆ । ಬಂದ ಭಯಗಳ ಪರಿಹರಿಸಿ ನಿಜ । ಮಂದಿರದಿ ಬೇಡಿದುದನಿತ್ತಾದರಿಸುವಂದದಲೀ ॥ ಹಿಂದೆ ಮುಂ ದೆಡಬಲದಿ ಒಳಹೊರ- । ಗಿಂದಿರೇಶನು ತನ್ನವರನೆಂ । ದೆಂದು ಸಲಹು ವನಾಗಸದ ಪೋಲೆತ್ತ ನೋಡಿದರೂ ॥ ೨೪ ॥

ಒಡಲ ನೆಳಲಂದದಲಿ ಹರಿ ನ- । ಮ್ಮೊಡನೆ ತಿರುಗುವ ಒಂದರೆ ಕ್ಷಣ । ಬಿಡದೆ ಬೆಂಬಲವಾಗಿ ಭಕ್ತಾಧೀನನೆಂದೆನಿಸೀ ॥ ತಡೆವ ದುರಿತೌ ಘಗಳ ಕಾಮದ । ಕೊಡುವ ಸಕಲೇಷ್ಟಗಳ ಸಂತತ । ನಡೆವ ನಮ್ಮಂದ ದಲಿ ನವಸುವಿಶೇಷಸನ್ಮಹಿಮ ॥ ೨೫ ॥

ಬಿಟ್ಟವರ ಭವಪಾಶದಿಂದಲಿ । ಕಟ್ಟುವನು ಬಹುಕಠಿನನಿವ ಶಿ- । ಷ್ಟೇಷ್ಟನೆಂದರಿದನವರತ ಸದ್ಭಕ್ತಿಪಾಶದಲಿ ॥ ಕಟ್ಟುವರ ಭವಕಟ್ಟುಬಿಡಿ ಸುವ । ಸಿಟ್ಟನವನಿವನಲ್ಲ ಕಾಮದ । ಕೊಟ್ಟು ಕಾವನು ಸಕಲಸೌಖ್ಯವ ನಿಹಪರಂಗಳಲಿ ॥ ೨೬ ॥

ಕಣ್ಣಿಗೆವೆಯಂದದಲಿ ಕೈ ಮೈ । ತಿಣ್ಣಿಗೊದಗುವತೆರದಿ ಪಲ್ಗಳು । ಹಣ್ಣುಫಲಗಳನಗಿದು ಜಿಹ್ವೆಗೆ ರಸವನೀವಂತೆ ॥ ಪುಣ್ಯಫಲಗಳನೀವು ದಕೆ ನುಡಿ- । ವೆಣ್ಣಿನಾಣ್ಮಾಂಡದೊಳು ಲಕ್ಷ್ಮಣ- । ನಣ್ಣನೊದಗುವ ಭಕ್ತರವಸರಕಮರಗಣಸಹಿತ ॥ ೨೭ ॥

ಕೊಟ್ಟದನು ಕೈಕೊಂಬರೆಕ್ಷಣ । ಬಿಟ್ಟಗಲ ತನ್ನವರ ದುರಿತ ಗ- । ಳಟ್ಟುವನು ದೂರದಲಿ ದುರಿತಾರಣ್ಯಪಾವಕನು ॥ ಬೆಟ್ಟ ಬೆನ್ನಲಿ ಹೊರಿಸಿದವರೊಳು । ಸಿಟ್ಟು ಮಾಡಿದನೇನೊ! ಹರಿ ಕಂ- । ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನು ॥ ೨೮ ॥

ಖೇದಮೋದಜಯಾಪಜಯ ಮೊದ- । ಲಾದ ದೋಷಗಳಿಲ್ಲ ಚಿನ್ಮಯ । ಸಾದರದಿ ತನ್ನಂಘ್ರಿಕಮಲವ ನಂಬಿ ಸ್ತುತಿಸುವರಾ ॥ ಕಾಮಕೊಂಡಿಹ ಪರಮಕರುಣ ಮ- । ಹೋದಧಿಯು ತನ್ನವರು ಮಾಳ್ಪಪ- । ರಾಧಗಳ ನೋಡದಲೆ ಸಂತತ ಸರ್ವಕಾಮದನು ॥ ೨೯ ॥

ಮಿನಾನ ಕೂರ್ಮ ವರಾಹ ನರಪಂ- । ಚಾನನಾತುಳಶೌರ್ಯ ವಾಮನ । ರೇಣುಕಾತ್ಮಜ ರಾವಣಾರಿ ನಿಶಾಚರಧ್ವಂಸೀ ॥ ಧೇನುಕಾಸುರಮಥನ ತ್ರಿಪುರವ । ಹಾನಿಗೈಸಿದ ನಿಪುಣ ಕಲಿಮುಖ । ದಾನವರ ಸಂಹರಿಸಿ ಧರ್ಮದಿ ಕಾಯ್ದ ಸುಜನರನು ॥ ೩೦ ॥

ಶ್ರೀಮನೋರಮ ಶಮಲವರ್ಜಿತ । ಕಾಮಿತಪ್ರದ ಕೈರವದಳ । ಶ್ಯಾಮ ಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖಾ ॥ ಸಾಮಸನ್ನುತ ಸಕಲಗುಣಗಣ- । ಧಾಮ ಶ್ರೀಜಗನ್ನಾಥ ವಿಟ್ಠಲ- । ನೀ ಮಹಿಯೊಳವತರಿಸಿ ಸಲಹಿದೆ ಸಕಲ ಸುಜನರನು ॥ ೩೧ ॥

ಅಂತು ಸಂಧಿ ಎರಡಕ್ಕೆ ಪದ ನಲ್ವತ್ತನಾಲ್ಕಕ್ಕೆ ಕರುಣಾಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೩. ವ್ಯಾಪ್ತಿಸಂಧಿ.

ಈ ಸಂಧಿಯಲ್ಲಿ ಪರಮಾತ್ಮನ ವ್ಯಾಪ್ತಿಯು ಸರ್ವತ್ರದಲ್ಲಿ ಉಂಟೆಂದು ಸಜ್ಜನರಿಗೆ ತಿಳಿಸುವುದಕ್ಕೋಸ್ಕರ ವ್ಯಾಪ್ತಿಕ್ರಮವನ್ನು ಹೇಳುತ್ತಾರೆ.

॥ ಶ್ರೀಮತ್ಸರ್ವಜ್ಞಾರಾಧಿತಪಾದಪಲ್ಲವಾಯ ನಮಃ ॥

ರಾಗ ಸಾರಂಗ, ಏಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಪುರುಷರೂಪತ್ರಯ ಪುರಾತನ । ಪುರುಷ ಪುರುಷೋತ್ತಮಕ್ಷರಾಕ್ಷರ- । ಪುರುಷಪೂಜಿತಪಾದ ಪೂರ್ಣಾನಂದಜ್ಞಾನಮಯಾ ॥ ಪುರುಷಸೂಕ್ತಸುಮೇಯ ತತ್ತ್ವ- । ತ್ಪುರುಷಹೃತ್ಪುಷ್ಕರನಿಲಯ ಮಹ । ಪುರುಷ ಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತಾ ॥ ೧ ॥

ಸ್ತ್ರೀನಪುಂಸಕಪುರುಷಭೂಸಲಿ- । ಲಾನಳಾನಿಲಗಗನಮನಶಶಿ । ಭಾನುಕಾಲಗುಣಪ್ರಕೃತಿಯೊಳಗೊಂದು ತಾನಲ್ಲಾ ॥ ಏನು ಇವನ ಮಹಾಮಹಿಮೆ ಕಡೆ- । ಗಾಣರಜಭವಶಕ್ರಮುಖರು ನಿ- । ಧಾನಿಸಲು ಮಾನವರಿಗಳವಡುವುದೆ ವಿಚಾರಿಸಲೂ ॥ ೨ ॥

ಗಂಧರಸರೂಪಸ್ಪರುಶ ಶ- । ಬ್ದೊಂದು ತಾನಲ್ಲದರದರ ಪೆಸ- । ರಿಂದ ಕರೆಸುತ ಜೀವರಿಗೆ ತರ್ಪಕನು ತಾನಾಗಿ ॥ ಪೊಂದಿಕೊಂಡಿಹ ಪರಮಕರುಣಾ । ಸಿಂಧು ಶಾಶ್ವತ ಮನವೆ ಮೊದಲಾ- । ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳಾ ॥ ೩ ॥

ಶ್ರವಣನಯನಘ್ರಾಣತ್ವಗ್ರಸ- । ನವುಗಳೊಳು ವಾಕ್ಪಾಣಿಪಾದಾ- । ದ್ಯವಯವಗಳೊಳು ತದ್ಗುಣಗಳೊಳು ತತ್ಪತಿಗಳೊಳಗೆ ॥ ಪ್ರವಿತತನು ತಾನಾಗಿ ಕೃತಿಪತಿ । ವಿವಿಧ ಕರ್ಮವ ಮಾಡಿ ಮಾಡಿಸಿ । ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ॥ ೪ ॥

ಗುಣಿಗುಣಗಳೊಳಗಿದ್ದು ಗುಣಿಗುಣ- । ನೆನಿಸುವನು ಗುಣಬದ್ಧ ನಾಗದೆ । ಗುಣಜಪುಣ್ಯಾಪುಣ್ಯಫಲ ಬ್ರಹ್ಮಾದಿಚೇತನಕೆ ॥ ಉಣಿಸುತವ ರೊಳಗಿದ್ದು ವೃಜಿನಾ- । ರ್ದನ ಚಿದಾನಂದೈಕದೇಹನು । ಕೊನೆಗೆ ಸಚ ರಾಚರಜಗದ್ಭಕ್ಷಕನೆನಿಸನವ್ಯಯನೂ ॥ ೫ ॥

ವಿದ್ಯೆ ತಾನೆಂದೆನಿಸಿಕೊಂಬನಿ- । ರುದ್ಧದೇವನು ಸರ್ವಜೀವರ । ಬುದ್ಧಿಯಲಿ ನೆಲಸಿದ್ದು ಕೃತಿಪತಿ ಬುದ್ಧಿಯೆನಿಸುವನೂ ॥ ಸಿದ್ಧಿಯೆನಿಸುವ ಸಂಕರುಷಣ ಪ್ರ- । ಸಿದ್ಧನಾಮಕ ವಾಸುದೇವನ- । ವದ್ಯರೂಪಚತು ಷ್ಟಯಗಳರಿತವನೆ ಪಂಡಿತನೂ ॥ ೬ ॥

ತನುಚತುಷ್ಟಯಗಳಲಿ ನಾರಾ- । ಯಣನು ಹೃತ್ಕಮಲಾಖ್ಯ ಸಿಂಹಾ- । ಸನದೊಳನಿರುದ್ಧಾದಿರೂಪಗಳಿಂದ ಶೋಭಿಸುತಾ ॥ ತನಗೆ ತಾನೇ ಸೇವ್ಯ ಸೇವಕ- । ನೆನಿಸಿ ಸೇವಾಸಕ್ತ ಸುರರೊಳ- । ಗನವರತ ನೆಲಸಿದ್ದು ಸೇವೆಯ ಕೊಂಬನವರಂತೆ ॥ ೭ ॥

ಜಾಗರಸ್ವಪ್ನಂಗಳೊಳು ವರ । ಭೋಗಿಶಯನ ಬಹು ಪ್ರಕಾರ ವಿ- । ಭಾಗ ಗೈಸಿ ನಿರಂಶಜೀವರ ಚಿಚ್ಛರೀರವನು ॥ ಭೋಗವಿತ್ತು ಸುಷುಪ್ತಿಕಾಲದಿ । ಸಾಗರವ ನದಿ ಕೂಡುವಂತೆ ವಿ- । ಯೋಗರಹಿತನು ಅಂಶಗಳನೇಕತ್ರವೈದಿಸುವಾ ॥ ೮ ॥

ಭಾರ್ಯರಿಂದೊಡಗೂಡಿ ಕಾರಣ । ಕಾರ್ಯವಸ್ತುಗಳಲ್ಲಿ ಪ್ರೇರಕ । ಪ್ರೇರ್ಯರೂಪಗಳಿಂದ ಪಟತಂತುಗಳ ವ್ಪೋಲಿದ್ದು ॥ ಸೂರ್ಯಕಿರಣ ಗಳಂತೆ ತನ್ನಯ । ವೀರ್ಯದಿಂದಲೆ ಕೊಡುತ ಕೊಳುತಿಹ- । ನಾರ್ಯ ರಿಗೆ ಈತನ ವಿಹಾರವು ಗೋಚರಿಪುದೇನೊ? ॥ ೯ ॥

ಜನಕ ತನ್ನಾತ್ಮಜಗೆ ವರಭೂ- । ಷಣ ದುಕೂಲವ ತೊಡಿಸಿ ತಾ ವಂ- । ದನೆಯ ಕೈಕೊಳುತವನ ಹರಸುತ ಹರುಷಬಡುವಂತೆ ॥ ವನ ರುಹೇಕ್ಷಣ ಪೂಜ್ಯಪೂಜಕ- । ನೆನಿಸಿ ಪೂಜಾಸಾಧನಪದಾ- । ರ್ಥನು ತನಗೆ ತಾನಾಗಿ ಫಲಗಳನೀವ ಭಜಕರಿಗೆ ॥ ೧೦ ॥

ತಂಪೆ ಬಹುಸಂಭ್ರಮದಿ ತನ್ನಯ । ಬಂಧುಬಳಗವ ನೆರಹಿ ಮದು ವೆಯ । ನಂದನಗೆ ತಾ ಮಾಡಿ ಮನೆಯೊಳಗಿಡುವ ತೆರನಂತೆ ॥ ಇಂದಿ ರಾಧವ ತನ್ನ ಇಚ್ಛೆಗ- । ಳಿಂದೆ ಗುಣಗಳ ಚೇತನಕೆ ಸಂ- । ಬಂಧಗೈಸಿ ಸುಖಾಸುಖಾತ್ಮಕ ಸಂಸೃತಿಯೊಳಿಡುವ ॥ ೧೧ ॥

ತೃಣಕೃತಾಲಯದೊಳಗೆ ಪೊಗೆ ಸಂ- । ದಣಿಸಿ ಪ್ರತಿಛಿದ್ರದಲಿ ಪೊರಮ- । ಟ್ಟನಳನಿರವನು ತೋರಿ ತೋರದಲಿಪ್ಪ ತೆರನಂತೆ ॥ ವನಜ ಜಾಂಡದೊಳಖಿಳಜೀವರ । ತನುವಿನೊಳಹೊರಗಿದ್ದು ಕಾಣಿಸ- । ದನಿ ಮಿಷೇಶನು ಸಕಲಕರ್ಮವ ಮಾಳ್ಪನವರಂತೆ ॥ ೧೨ ॥

ಪಾದಪಗಳಡಿಗೆರೆಯೆ ಸಲಿಲವು । ತೋರದು ಕೊಂಬೆಗಳುಬ್ಬಿ ಪುಷ್ಪ- । ಸ್ವಾದುಫಲವೀವಂದದಲಿ ಸರ್ವೇಶ್ವರನು ಜನರಾ- ॥ ರಾಧ ನೆಯ ಕೈಕೊಂಡು ಬ್ರಹ್ಮಭ- । ವಾದಿಗಳ ನಾಮದಲಿ ಫಲವಿ- । ತ್ತಾದ ರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ ॥ ೧೩ ॥

ಶ್ರುತಿತತಿಗಳಿಗೆ ಗೋಚರಿಸದ- । ಪ್ರತಿಮಜಾನಂದಾತ್ಮನಚ್ಯುತ । ವಿತತ ವಿಶ್ವಾಧಾರ ವಿದ್ಯಾಧೀಶ ವಿಧಿಜನಕಾ ॥ ಪ್ರತಿದಿವಸ ಚೇತನರೊ ಳಗೆ ಪ್ರಾ- । ಕೃತಪುರುಷನಂದದಲಿ ಸಂಚರಿ- । ಸುತ ನಿಯಮ್ಯ ನಿಯಾ ಮಕನು ತಾನಾಗಿ ಸಂತೈಪಾ ॥ ೧೪ ॥

ಮನವಿಷಯದೊಳಗಿರಿಸಿ ವಿಷಯವ । ಮನದೊಳಗೆ ನೆಲೆಗೊಳಿಸಿ ಬಲು ನೂ- । ತನವು ಸುಸವಿಯಾಚೀನವಿದುಪಾದೇಯವೆಂದರುಪಿ ॥ ಕನ ಸಿಲಾದರು ತನ್ನ ಪಾದದ । ನೆನವನೀಯದೆ ಸರ್ವರೊಳಗಿ- । ದ್ದನುಭವಿ ಸುವನು ಸ್ಥೂಲವಿಷಯವ ವಿಶ್ವನೆಂದೆನಿಸಿ ॥ ೧೫ ॥

ತೋದಕನು ತಾನಾಗಿ ಮನವೊದ- । ಲಾದ ಕರಣದೊಳಿದ್ದು ವಿಷಯವ- । ನೈದುವನು ನಿಜಪೂರ್ಣ ಸುಖಮಯ ಗ್ರಾಹ್ಯಗ್ರಾಹ ಕನು ॥ ವೇದವೇದ್ಯನು ತಿಳಿಯದವನೋ- । ಪಾದಿ ಭುಂಜಿಸುತೆಲ್ಲರೊ ಳಗಾ- । ಹ್ಲಾದಬಡುವನು ಭಕ್ತವತ್ಸಲ ಭಾಗ್ಯಸಂಪನ್ನಾ ॥ ೧೬ ॥

ನಿತ್ಯ ನಿಗಮಾತೀತ ನಿರ್ಗುಣ । ಭೃತ್ಯವತ್ಸಲ ಭಯವಿನಾಶನ । ಸತ್ಯಕಾಮ ಶರಣ್ಯ ಶ್ಯಾಮಲ ಕೋಮಲಾಂಗ ಸುಖೀ ॥ ಮತ್ತನಂದದಿ ಮರ್ತ್ಯರೊಳಹೊರ- । ಗೆತ್ತ ನೋಡಲು ಸುತ್ತುತಿಪ್ಪನು । ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ನಿರ್ಲಿಪ್ತ ॥ ೧೭ ॥

ಪವಿಹರಿನ್ಮಣಿವಿದ್ರುಮದ ಸ- । ಚ್ಛವಿಗಳಂದದಿ ರಾಜಿಸುತ ಮಾ-। ಧವ ನಿರಂತರ ದೇವಮಾನವದಾನವರೊಳಿದ್ದು ॥ ತ್ರಿವಿಧಗುಣಕರ್ಮ ಸ್ವಭಾವವ । ಪವನಮುಖದೇವಾಂತರಾತ್ಮಕ । ದಿವಸದಿವಸದಿ ವ್ಯಕ್ತಿ ಮಾಡುತಲವರೊಳಿದ್ದುಣಿಪಾ ॥ ೧೮ ॥

ಅಣುಮಹತ್ತಿನೊಳಿಪ್ಪ ಘನ ಪರ- । ಮಣುವಿನೊಳಗಡಗಿಸುವ ಸೂಕ್ಷ್ಮವ । ಮುಣುಗಿಸುವ ತೇಲಿಸುವ ಸ್ಥೂಲಗಳವನ ಮಾಯವಿದು ॥ ದನುಜ ರಕ್ಕಸರೆಲ್ಲರಿವನೊಳು । ಮುಸಿದು ಮಾಡುವುದೇನುಲೂಖಲ । ವನಿಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪಾ ॥ ೧೯ ॥

ದೇವಮಾನವದಾನವರು ಯಿಂ- । ದೀವಿಧವಲಾವಾಗಲಿಪ್ಪರು । ಮೂವರೊಳಗಿವಗಿಲ್ಲ ಸ್ನೇಹೋದಾಸಿನದ್ವೇಷ ॥ ಜೀವರಧಿಕಾರಾನುಸಾರದ- । ಲೀವ ಸುಖಸಂಸಾರದುಃಖವ । ತಾ ವುಣದಲವರವರಿಗುಣಿಸುವ ನಿರ್ಗತಾಶನನೂ ॥ ೨೦ ॥

ಎಲ್ಲಿ ಕೇಳಿದರೆಲ್ಲಿ ನೋಡಿದ- । ರೆಲ್ಲಿ ಬೇಡಿದರೆಲ್ಲಿ ನೀಡಿದ- । ರೆಲ್ಲಿ ವೋಡಿದರೆಲ್ಲಿ ಆಡಿದರಲ್ಲೆ ಇರುತಿಹನು ॥ ಬಲ್ಲಿದರಿಗತಿಬಲ್ಲಿದನು ಸರಿ-। ಯಿಲ್ಲ ಯಿವಗಾವಲ್ಲಿ ನೋಡಲು । ಖುಲ್ಲಮಾನವನೊಲ್ಲನಪ್ರತಿಮಲ್ಲ ಜಗಕೆಲ್ಲಾ ॥ ೨೧ ॥

ತಪ್ತಲೋಹವು ನೋಳ್ಪ ಜನರಿಗೆ । ಸಪ್ತಜಿಹ್ವನ ತೆರದಿ ತೋರ್ಪುದು । ಲುಪ್ತಪಾವಕ ಲೋಹ ಕಾಂಬುದು ಪೂರ್ವದೋಪಾದೀ ॥ ಸಪ್ತವಾಹನ ನಿಖಿಳಜನರೊಳು । ವ್ಯಾಪ್ತನಾದುದರಿಂದ ಸರ್ವರು । ಆಪ್ತರಾಗಿಹರೆಲ್ಲಕಾಲದಿ ಹಿತವ ಕೈಕೊಂಡು ॥ ೨೨ ॥

ವಾರಿದನು ಮಳೆಗರೆಯೆ ಬೆಳೆದಿಹ । ಭೂರುಹಂಗಳ ಚಿತ್ರಫಲ ರಸ । ಬೇರೆಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು ॥ ಮಾರಮಣನ ವರವರ ಯೋಗ್ಯತೆ । ವಿಾರದೇ ಗುಣಕರ್ಮಗಳ ಅನು । ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹುದು ॥ ೨೩ ॥

ವಾರಿಜಾಪ್ತನ ಕಿರಣ ಮಣಿಗಳ । ಸೇರಿ ತತ್ತದ್ವರ್ಣಗಳನು ವಿ-। ಕಾರ ಗೈಸದೆ ನೋಳ್ಪರಿಗೆ ಕಂಗೊಳಿಸುವಂದದಲಿ ॥ ಮಾರಮಣ ಲೋಕತ್ರಯದೊಳಿಹ । ಮೂರುವಿಧಜೀವರೊಳಗಿದ್ದು ವಿ- । ಹಾರ ಮಾಡುವನವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥

ಜಲವನಪಹರಿಸುವ ಘಳಿಗೆ ಬ- । ಟ್ಟಲನುಳಿದು ಜಯಘಂಟಿ ಕೈಪಿಡಿ- । ದೆಳೆದು ಹೊಡೆವಂದದಲಿ ಸಂತತ ಕರ್ತೃ ತಾನಾಗಿ ॥ ಹಲಧರಾನುಜ ಪುಣ್ಯಪಾಪದ । ಫಲಗಳನು ದೇವಾಸುರರ ಗಣ- । ದೊಳು ವಿಭಾಗವ ಮಾಡಿಯುಣಿಸುತ ಸಾಕ್ಷಿಯಾಗಿಪ್ಪ ॥ ೨೫ ॥

ಪೊಂದಿಕೊಂಡಿಹ ಸರ್ವರೊಳು ಸಂ- । ಬಂಧವಾಗದೆ ಸಕಲ ಕರ್ಮವ- । ರಂದದಲಿ ತಾ ಮಾಡಿ ಮಾಡಿಸಿ ತತ್ಫಲಗಳುಣದೆ ॥ ಕುಂದದಣುವು ಮಹತ್ತೆನಿಪ ಘಟ । ಮಂದಿರದಿ ಸರ್ವತ್ರ ತುಂಬಿಹ । ಬಾಂದಳವ ತೆರನಂತೆ ಇರುತಿಪ್ಪನು ರಮಾರಮಣ ॥ ೨೬ ॥

ಕಾದ ಕಬ್ಬಿಣ ಹಿಡಿದು ಬಡಿಯಲು । ವೇದನೆಯು ಲೋಹಗಳಿಗಲ್ಲದೆ । ಆದುದೇನೈ ಅನಳಗಾವ್ಯಥೆಯೇನು ಮಾಡಿದರು ॥ ಆದಿದೇವನು ಸರ್ವಜೀವರ । ಕಾದು ಕೊಂಡಿಹನೊಳಹೊರಗೆ ದುಃ- । ಖಾದಿಗಳು ಸಂಬಂಧವಾಗುವವೇನೊ ಚಿನ್ಮಯಗೆ ॥ ೨೭ ॥

ಮಳಲಮನೆಗಳ ಮಾಡಿ ಮಕ್ಕಳು । ಕೆಲವು ಕಾಲದಲಾಡಿ ಮೋದದಿ । ತುಳಿದು ಕೆಡಿಸುವ ತೆರದಿ ಲಕ್ಷ್ಮೀರಮಣ ಲೋಕಗಳಾ ॥ ಹಲವು ಬಗೆಯಲಿ ನಿರ್ಮಿಸುವ ನಿ । ಶ್ಚಲನು ತಾನಾಗಿದ್ದು ಸಲಹುವ-। ನೆಲರುಣಿಯ ಪೋಲ್ ನುಂಗುವಗೆ ಯೆಲ್ಲಿಹುದೊ ಸುಖದುಃಖ ॥ ೨೮ ॥

ವೇಷಭಾಷೆಗಳಿಂದ ಜನರ ಸು- । ತೋಷಗೈಸುವ ನಟಪುರುಷ
ನೋಲ್ । ದೋಷದೂರನು ಲೋಕದೊಳು ಬಹುರೂಪವಾತಿನಲಿ ॥
ತೋಷಿಸುವನವರವರ ಮನದಭಿ- । ಲಾಷೆಗಳ ಪೂರೈಸುತನುದಿನ ।
ಪೋಷಿಸುವ ಪೂತಾತ್ಮ ಪೂರ್ಣಾನಂದ ಜ್ಞಾನಮಯ ॥ ೨೯ ॥

ಅಧಮಮಾನವನೋರ್ವ ಮಂತ್ರೌ- । ಷಧಗಳನು ತಾನರಿತು
ಪಾವಕ । ಉದಕಗಳ ಸಂಬಂಧವಿಲ್ಲದೆ ಇಪ್ಪನದರೊಳಗೆ ॥ ಪದುಮ
ಜಾಂಡೋದರನು ಸರ್ವರ । ಹೃದಯದೊಳಗಿರೆ ಕಾಲಗುಣಕ- । ರ್ಮದ
ಕಲುಷಸಂಬಂಧವಾಗುವವೇ? ನಿರಂಜನಗೆ ॥ ೩೦ ॥

ಒಂದು ಗುಣದೊಳನಂತ ಗುಣಗಳು । ವೊಂದು ರೂಪದೊಳಿಹವು
ಲೋಕಗ- । ಳೊಂದೆ ರೂಪದಿ ಧರಿಸಿ ತದ್ಗತಪದಾರ್ಥದೊಳಹೊರಗೆ ॥
ಬಾಂದಳದ ವೋಲಿದ್ದು ಬಹು ಪೆಸ- । ರಿಂದ ಕರೆಸುತ ಪೂರ್ಣಜ್ಞಾನಾ-।
ನಂದಮಯ ಪರಿಪರಿ ವಿಹಾರವ ಮಾಡಿ ಮಾಡಿಸುವ ॥ ೩೧ ॥

ಎಲ್ಲರೊಳು ತಾನಿಪ್ಪ ತನ್ನೊಳ- । ಗೆಲ್ಲರನು ಧರಿಸಿಹನು ಅಪ್ರತಿ-।
ಮಲ್ಲ ಮನ್ಮಥಜನಕ ಜಗದಾದ್ಯಂತಮಧ್ಯಗನಾ ॥ ಬಲ್ಲ ಬಹುಗುಣ
ಭರಿತ ದಾನವ । ದಲ್ಲಣ ಜಗನ್ನಾಥವಿಠಲನು । ಸೊಲ್ಲ ಲಾಲಿಸಿ ಸ್ತಂಭ
ದಿಂದಲಿ ಬಂದ ಭಕತನಿಗೆ ॥ ೩೨ ॥

ಅಂತು ಸಂಧಿ ಮೂರಕ್ಕೆ ಪದ ಎಪ್ಪತ್ತಾರಕ್ಕೆ ವ್ಯಾಪ್ತಿಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೪. ಭೋಜನರಸವಿಭಾಗಸಂಧಿ.

ಈ ಬ್ರಹ್ಮಾಂಡದಲ್ಲಿ ಸಮಸ್ತ ಚರಾಚರ ಜೀವರು ಭೋಜನಮಾಡತಕ್ಕಂಥ ಖಾದ್ಯ, ಚೋಷ್ಯ, ಪೇಯ, ಲೇಹ್ಯಗಳೆಂಬ ಚತುರ್ವಿಧ ಪದಾರ್ಥದಲ್ಲಿ ಚತುರ್ವಿಧ ರಸರೂಪಗಳನ್ನು ಧರಿಸಿ ತಾನೇ ಮನಸ್ಸಿಗೆ ಬಂದ ಹಾಗೆ ಭೋಜನಮಾಡಿ, ಜೀವರಿಗೂ ಉಣ್ಣಿಸುವ ಕ್ರಮವನ್ನು ಅಂದರೆ ಭೋಜನಕ್ಕೆ ಯೋಗ್ಯವಾದ ಪದಾರ್ಥದಲ್ಲಿರುವ ಭಗವದ್ರೂಪಕ್ಕೆ ಸ್ವಹೃತ್ಕಮಲಸ್ಥ ಬಿಂಬದಲ್ಲಿ ಐಕ್ಯಚಿಂತನೆ ಮಾಡಿ ಅರ್ಪಿಸುವ ಕ್ರಮವನ್ನು ಹೇಳುತ್ತಾರೆ.

॥ ಶ್ರೀವೇದವ್ಯಾಸಾಯ ನಮಃ ॥

ರಾಗ ರೇಗುಪ್ತಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ವನಜಜಾಂಡದೊಳುಳ್ಳಖಿಳ ಚೇ- । ತನರು ಭುಂಜಿಪ ಚತುರವಿಧ
ಭೋ- । ಜನಪದಾರ್ಥದಿ ಚತುರವಿಧ ರಸರೂಪ ತಾನಾಗಿ ॥ ಮನಕೆ
ಬಂದುದನುಂಡುಣಿಸಿ ಸಂ- । ಜನನಕುಪಚಯ ಕರಣಕಾನಂ- । ದನಿಮಿ
ಷರಿಗಾತ್ಮಪ್ರದರ್ಶನಸುಖವನೀವ ಹರಿ ॥ ೧ ॥

ನೀಡದಂದದಲಿಪ್ಪ ಲಿಂಗಕೆ । ಷೋಡಶಾತ್ಮಕ ರಸವಿಭಾಗವ ।
ಮಾಡಿ ಷೋಡಶಕಳೆಗಳಿಗೆ ಉಪಚಯಗಳನೆ ಕೊಡುತಾ ॥ ಕ್ರೋಡ
ಯೆಪ್ಪತ್ತೆರಡುಸಾವಿರ । ನಾಡಿಗತದೇವತೆಗಳೊಳಗಿ- । ದ್ದಾಡುತಾನಂ
ದಾತ್ಮ ಚರಿಸುವ ಲೋಕದೊಳು ತಾನೂ ॥ ೨ ॥

ವಾರಿವಾಚ್ಯನು ವಾರಿಯೊಳಗಿ- । ದ್ದಾರು ರಸವೆಂದೆನಿಸಿ ಮುಪ್ಪ- ।
ತ್ತಾರು ಸಾವಿರ ಸ್ತ್ರೀಪುರುಷನಾಡಿಯಲಿ ತದ್ರೂಪ ॥ ಧಾರಕನು ತಾನಾಗಿ
ಸರ್ವಶ- । ರೀರದೊಳಹಶ್ಚರಾತ್ರಿಯಲ್ಲಿ ವಿ- । ಹಾರಮಾಳ್ಪನು ಬೃಹತಿ
ಯೆಂಬ ಸುನಾಮದಿಂ ಕರೆಸಿ ॥ ೩ ॥

ಆರು ರಸ ಸತ್ವಾದ್ಯದಿಭೇದದಿ । ಆರು ಮೂರಾಗಿಹವು ಸಾರಾ-। ಸಾರ ನೀತಾನೀತ ಖಂಡಾಖಂಡ ಚಿತ್ರಚುರಾ ॥ ಈರಧಿಕ ಎಪ್ಪತ್ತು ಸಾವಿರ । ಮಾರರಮಣನ ರಸಾಖ್ಯರೂಪ ಶ- । ರೀರದೊಳು ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು ॥ ೪ ॥

ಕ್ಷೀರಗತರಸರೂಪಗಳು ಮು- । ನ್ನೂರು ಮೇಲೈವತ್ತನಾಲಕು । ಚಾರುಘೃತರಸರೂಪಗಳು ಇಪ್ಪತ್ತರೊಂಭತ್ತು ॥ ಸಾರಗುಡದೊಳಗೈದು ಸಾವಿರ । ನೂರುವಂದು ಸುರೂಪ ದ್ವಿಸಹ- । ಸ್ರಾರೆರಡು ಶತಪಂಚವಿಂಶತಿ ರೂಪ ಫಲಗಳಲಿ ॥ ೫ ॥

ವಿಶದ ಸ್ಥಿರ ತೀಕ್ಷ್ಣವು ನಿರಹರ । ರಸಗಳೊಳು ಮೂರೈದು ಸಾವಿರ । ತ್ರಿಶತನವರೂಪಗಳ ಚಿಂತಿಸಿ ಭುಂಜಿಪುದು ವಿಷಯಾ ॥ ಶ್ವಸನತತ್ವೇಶರೊಳಗಿದ್ದೀ । ಪೆಸರಿನಿಂದಲಿ ಕರೆಸುವನು ಧೇ- । ನಿಸಿದರೀ ಪರಿ ಮನಕೆ ಪೊಳೆವನು ಬಲ್ಲ ವಿಬುಧರಿಗೆ ॥ ೬ ॥

ಕಪಿಲ ನರಹರಿ ಭಾರ್ಗವ ತ್ರಯು । ವಪುಷ ನೇತ್ರದಿ ನಾಸಿಕಾಸ್ಯದಿ । ಶಫರನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯ ॥ ತ್ರಿಪದಿಪಾದ್ಯ ಹಯಾಸ್ಯ ವಾಚ್ಯದೊ- । ಳಪರಿಮಿತಸುಖಪೂರ್ಣ ಸಂತತ । ಕೃಪಣರೊಳಗಿದ್ದವರವರ ರಸ ಸ್ವೀಕರಿಸಿ ಕೊಡುವ ॥ ೭ ॥

ನಿರುಪಮಾನಂದಾತ್ಮ ಹರಿ ಸಂ- । ಕರುಷಣ ಪ್ರದ್ಯುಮ್ನರೂಪದಿ । ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಯೆನಿಸಿ ॥ ಕರೆಸುವನು ನಾರಾಯಣನಿರು- । ದ್ಧರೆಡು ನಾಮದಿ ಭೋಜ್ಯವಸ್ತುಗ । ನಿರತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥ ೮ ॥

ವಾಸುದೇವನು ಒಳಹೊರಗೆ ಅವ- । ಕಾಶ ಕೊಡುವ ನಭಸ್ಥನಾಗಿರ- । ಮಾಸಮೇತ ವಿಹಾರ ಮಾಳ್ಪನು ಪಂಚರೂಪದಲೀ ॥ ಆ ಸರೋರುಹಸಂಭವಾಭವ । ವಾಸವಾದ್ಯಮರಾದಿಚೇತನ । ರಾಶಿಯೊಳಗಿಹನೆಂದು ಅರಿತವನವನೆ ಕೋವಿದನು ॥ ೯ ॥

ವಾಸುದೇವನು ಅನ್ನದೊಳು ನಾ- । ನಾಸುಭಕ್ಷ್ಯಾದಿ ಸಂಕರುಷಣ ಕೃ- । ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ ॥ ಆ ಸುಪ ರ್ಣಾಂಸಗನು ಸೂಪದಿ । ವಾಸವಾನುಜ ಶಾಕದೊಳು ಮೂ- । ಲೇಶ ನಾರಾಯಣನು ಸರ್ವತ್ರದಲಿ ನೆಲಸಿಹನು ॥ ೧೦ ॥

ಅಗಣಿತಾತ್ಮ ಸುಭೋಜನಪದಾ- । ರ್ಥಗಳ ಒಳಗೆ ಅಖಂಡ ವಾದೊಂ- । ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ ॥ ಜಗದಿ ಜೀವರ ತೃಪ್ತಿಬಡಿಸುವ- । ಸ್ವಗತಭೇದವಿವರ್ಜಿತನ ಇ- । ರ್ಬಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ ॥ ೧೧ ॥

ಈಪರಿಯಲರಿತುಂಬ ನರ ನಿ- । ತ್ಯೋಪವಾಸಿ ನಿರಾಮಯನು ನಿ- । ಷ್ಪಾಪ ನಿತ್ಯಮಹಾಸುಯಜ್ಞಗಳಾಚರಿಸಿದವನು ॥ ಪೋಪುದಿಪ್ಪುದು ಬಪ್ಪುದೆಲ್ಲ ರ- । ಮಾಪತಿಗಧಿಷ್ಠಾನವೆನಲು ಕೃ- । ಪಾಪಯೋನಿಧಿ ಮಾತನಾಲಿಸುವನು ಜನನಿಯಂತೆ ॥ ೧೨ ॥

ಆರೆರಡುಸಾವಿರದ ಮೇಲಿ- । ನ್ನೂರು ಐವತ್ತೊಂದು ರೂಪದಿ । ಸಾರಭೋಕ್ತನಿರುದ್ಧದೇವನು ಅನ್ನಮಯನೆನಿಪ ॥ ಮೂರೆರಡುವರೆ ಸಾವಿರದ ಮೇಲ್ । ಮೂರಧಿಕ ನಾಲ್ವತ್ತು ರೂಪದಿ । ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥ ೧೩ ॥

ಎರಡು ಕೋಶಗಳೊಳಹೊರಗೆ ಸಂ- । ಕರುಷಣೈದು ಸುಲಕ್ಷ ದರುವ- । ತ್ತೆರಡು ಸಾವಿರದೇಳಧಿಕಶತ ರೂಪಗಳ ಧರಿಸಿ ॥ ಕರೆಸಿ ಕೊಂಬ ಮನೋಮಯನು ಯೆಂ- । ದರವಿದೂರನು ಈರೆರಡು ಸಾ- । ವಿರದ ಮುನ್ನೂರಾದ ಮೇಲ್ನಾಲ್ಕಧಿಕ ಯೆಪ್ಪತ್ತು ॥ ೧೪ ॥

ರೂಪದಿಂ ವಿಜ್ಞಾನಮಯನೆಂ- । ಬೀಪೆಸರಿನಿಂ ವಾಸುದೇವನು । ವ್ಯಾಪಿಸಿಹ ಮಹದಾದಿತತ್ವವ ತತ್ಪತಿಗಳೊಳಗೆ ॥ ಈಪುರುಷನಾಮಕನ ಶುಭಸ್ವೇ- । ದಾಪಳೆನಿಸಿ ರಮಾಂಬ ತಾ ಬ್ರ- । ಹ್ಮಾಪರೋಕ್ಷಿಗಳಾದ ವರ ಲಿಂಗಾಂಗ ಕೆಡಿಸುವಳು ॥ ೧೫ ॥

ಐದುಸಾವಿರನೂರ ಯಿಪ್ಪ- । ತ್ತೈದು ನಾರಾಯಣನ ರೂಪವ । ತಾ ಧರಿಸಿಕೊಂಡನುದಿನದಲಾನಂದಮಯನೆನಿಪಾ ॥ ಐದುಲಕ್ಷದ ಮೇಲೆ ಯೆಂಭ- । ತ್ತೈದುಸಾವಿರ ನಾಲ್ಕುಶತಗಳ । ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನೂ ॥ ೧೬ ॥

ನೂರುವೊಂದು ಸುರೂಪದಿಂ ಶಾಂ- । ತೀರಮಣ ತಾನನ್ನ ನೆನಿಪ್ಪೈ- । ನೂರು ಮೇಲ್ಮೂರಧಿಕದಶ ಪ್ರಾಣಾಖ್ಯ ಪ್ರದ್ಯುಮ್ನ ॥ ತೋರುತಿಹನೈವತ್ತುಐದು ವಿ- । ಕಾರ ಮನದೊಳು ಸಂಕರುಷಣೈ- । ನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ ॥ ೧೭ ॥

ಮೂರುಸಾವಿರದರ್ಧಶತ ಮೇ- । ಲೀರಧಿಕರೂಪಗಳ ಧರಿಸಿ ಶ- । ರೀರದೊಳಗಾನಂದಮಯ ನಾರಾಯಣಾಹ್ವಯನೂ ॥ ಈರೆರಡುಸಾವಿರದ ಮೇಲ್ಮು- । ನ್ನೂರುಐದು ಸುರೂಪದಿಂದಲಿ । ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ॥ ೧೮ ॥

ಮೂರಧಿಕಐವತ್ತು ಪ್ರಾಣಶ- । ರೀರದೊಳಗನಿರುದ್ಧನಿಪ್ಪೈ- । ನೂರು ಹನ್ನೊಂದಧಿಕಪಾನದೊಳಿಪ್ಪ ಪ್ರದ್ಯುಮ್ನ ॥ ಮೂರನೇ ವ್ಯಾನನೊಳಗೈದರೆ । ನೂರು ರೂಪದಿ ಸಂಕರುಷಣೈ- । ನೂರುಮುವ್ವತ್ತೈದು ದಾನನೊಳಿಪ್ಪ ಮಾಯೇಶ ॥ ೧೯ ॥

ಮೂಲನಾರಾಯಣನು ಐವ- । ತ್ತೇಳಧಿಕ ಐನೂರು ರೂಪವ । ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವೇಶ ॥ ಲೀಲೆಗೈವನು ಸಾವಿರದ ಮೇ- । ಲೇಳುನೂರರ್ನೊಂದು ರೂಪವ । ತಾಳಿ ಪಂಚಪ್ರಾಣರೊಳು ಲೋಕಗಳ ಸಲಹುವನು ॥ ೨೦ ॥

ತ್ರಿನವತಿ ಸುರೂಪಾತ್ಮಕನಿರು- । ದ್ಧನು ಸದಾ ಯಜಮಾನನಾಗಿ- । ದ್ದನಲಯಮಸೋಮಾದಿಪಿತೃದೇವತೆಗಳಿಗೆ ಅನ್ನ- ॥ ನೆನಿಪನಾ ಪ್ರದ್ಯುಮ್ನ ಸಂಕರು- । ಷಣವಿಭಾಗವ ಮಾಡಿಕೊಟ್ಟುಂ- । ಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಹ್ವ ॥ ೨೧ ॥

ಷಣ್ಣವತಿನಾಮಕನು ವಸು ಮು- । ಕ್ಕಣ್ಣ ಭಾಸ್ಕರರೊಳಗೆ ನಿಂತು ಪ್ರ- । ಪನ್ನರನುದಿನ ನಿಷ್ಕಪಟಸದ್ಭಕ್ತಿಯಲಿ ಮಾಳ್ಪ ॥ ಪುಣ್ಯ ಕರ್ಮವ ಸ್ವೀಕರಿಸಿ ಕಾ- । ರುಣ್ಯಸಾಗರನಾಪಿತೃಗಳಿಗ- । ಗಣ್ಯಸುಖ ವಿತ್ತವರ ಪೊರೆವನು ಎಲ್ಲ ಕಾಲದಲಿ ॥ ೨೨ ॥

ಸುತಪನೇಕೋತ್ತರಸುಪಂಚಾ- । ಶತವರಣಕರಣದಿ ಚತುರ್ವಿಂ- । ಶತಿ ಸುತತ್ವದಿ ಧಾತುಗಳೊಳಿದ್ದವಿರತನಿರುದ್ಧಾ ॥ ಜತನ ಮಾಳ್ಪನು ಜಗದಿ ಜೀವ- । ಪ್ರತತಿಗಳ ಷಣ್ಣವತಿನಾಮಕ । ಚತುರಮೂರ್ತಿಗಳ ರ್ಚಿಸುವರದರಿಂದೆ ಬಲ್ಲವರು ॥ ೨೩ ॥

ಅಬುಜಜಾಂಡೋದರನು ವಿಪಿನದಿ । ಶಬರಿಯೆಂಜಲನುಂಡು ಗೋಕುಲ- । ದಬಲೆಯರನೊಲಿಸಿದನು ಋಷಿಪತ್ನಿಯರು ಕೊಟ್ಟನ್ನ ॥ ಸುಭುಜ ತಾ ಭುಂಜಿಸಿದ ಸ್ಮರಮಣ । ಕುಬುಜೆಗಂಧಕೆ ಒಲಿದ ಮುನಿಗಣ । ವಿಬುಧಸೇವಿತ ಬಿಡುವನೇ ನಾವಿತ್ತ ಕರ್ಮಫಲ ॥ ೨೪ ॥

ಗಣನೆಯಿಲ್ಲದ ಪರಮಸುಖಸ- । ದ್ಗುಣಗಣಂಗಳ ಲೇಶಲೇಶಕೆ । ಎಣೆಯೆನಿಸದು ರಮಾಬ್ಜಭವಶಕ್ರಾದಿಗಳ ಸುಖವು ॥ ಉಣುತುಣುತ ಮೈಮರೆದು ಕೃಷ್ಣಾ- । ರ್ಪಣವೆನಲು ಕೈಗೊಂಬನರ್ಭಕ । ಜನನಿ ಭೋಜನಸಮಯದಲಿ ಕೈಯೊಡ್ಡುವಂದದಲಿ ॥ ೨೫ ॥

ಜೀವಕೃತಕರ್ಮಗಳ ಬಿಡದೆ ರ- । ಮಾವರನು ಸ್ವೀಕರಿಸಿ ಫಲಗಳ । ನೀವನಧಿಕಾರಾನುಸಾರದಲವರಿಗನವರತಾ ॥ ಪಾವಕನು ಸರ್ವಸ್ವ ಭುಂಜಿಸಿ । ತಾ ವಿಕಾರವನೈದನೊಮ್ಮೆಗೆ । ಪಾವನಕೆ ಪಾವನನೆನಿಪ ಹರಿಯುಂಬುದೇನರಿದು ॥ ೨೬ ॥

ಕಲುಷಜಿಹ್ವೆಗೆ ಸುಷ್ಟುಭೋಜನ । ಜಲವೊದಲು ವಿಷದೋರುವುದು ನಿ- । ಷ್ಕಲುಷಜಿಹ್ವೆಗೆ ಸುರಸತೋರುವುದೆಲ್ಲ ಕಾಲದಲೀ ॥ ಸುಲಲಿತಾಂಗಗೆ ಸಕಲ ರಸ ಮಂ- । ಗಳವೆನಿಸುತಿಹುದನ್ನಮಯ ಕೈ । ಗೊಳದೆ ಬಿಡುವನೆ ಪೂತನಿಯ ವಿಷಮೊಲೆಯನುಂಡವನು ॥ ೨೭ ॥

ಪೇಳಲೇನು ಸಮೀರದೇವನು । ಕಾಳಕೂಟವನುಂಡು ಲೋಕವ ।
ಪಾಲಿಸಿದ ತದ್ದಾಸನೋರ್ವನು ಅಮೃತನೆನಿಸಿದನು ॥ ಶ್ರೀಲಕುಮಿಯೊ
ಲ್ಲಭ ಶುಭಾಶುಭ । ಜಾಲಕರ್ಮಗಳುಂಬನುಪಚಯ- । ದೇಳಿಗೆಗಳವ
ಗಿಲ್ಲವೆಂದಿಗು ಸ್ವರಸಗಳ ಬಿಟ್ಟು ॥ ೨೮ ॥

ಈ ಪರಿಯುಲಚ್ಯುತನ ತತ್ತ್- । ದ್ರೂಪತನ್ನಾಮಗಳ ಸಲೆ ನಾ-।
ನಾ ಪದಾರ್ಥದಿ ನೆನೆನೆನೆದು ಭುಂಜಿಸುತಲಿರು ವಿಷಯಾ ॥ ಪ್ರಾಪಕ
ಸ್ಥಾಪಕನಿಯಾಮಕ । ವ್ಯಾಪಕನು ಯೆಂದರಿದು ನೀ ನಿ- । ರ್ಲೇಪನಾ
ಗಿರು ಪುಣ್ಯಪಾಪಗಳರ್ಪಿಸವನಡಿಗೇ ॥ ೨೯ ॥

ಐದುಲಕ್ಷೆಂಭತ್ತರೊಂಭ- । ತ್ತಾದಸಾವಿರದೇಳನೂರರ । ಐದು
ರೂಪವ ಧರಿಸಿ ಭೋಕ್ತೃಗ ಭೋಜ್ಯನೆಂದೆನಿಸಿ ॥ ಶ್ರೀಧರಾದುರ್ಗಾರ
ಮಣ ಪಾ- । ದಾದಿಶಿರಪರ್ಯಂತ ವ್ಯಾಪಿಸಿ । ಕಾದುಕೊಂಡಿಹ ಸಂತತ
ಜಗನ್ನಾಥ ವಿಟ್ಠಲನು ॥ ೩೦ ॥

ಅಂತು ಸಂಧಿ ೪ಕ್ಕೆ ಪದ ೧೦೬ಕ್ಕೆ ಭೋಜನರಸವಿಭಾಗಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೫. ವಿಭೂತಿಸಂಧಿ.

ಸರ್ವಪ್ರಾಣಿಗಳಲ್ಲಿ ಹಾಗೆಯೇ ಜಡಗಳಲ್ಲಿ ಪರಮಾತ್ಮನ ವಿಭೂತಿರೂಪವನ್ನು ತಿಳಿಯಬೇಕೆಂದು ಹೇಳುತ್ತಾರೆ. ವಿಭೂತಿಯೆಂದರೆ ಐಶ್ವರ್ಯ, ಅಧಿಷ್ಠಾನ. ಅಧಿಕಾರಿ ದೆಶೆಯಿಂದ ಅವರವರಲ್ಲಿ ಆವಿಷ್ಟನಾಗಿ ಅತಿಶಯಸಮಾನ ಕಾರ್ಯಗಳನ್ನು ಮಾಡಿಸುತ್ತಾನೆ. ಇದೇ ವಿಭೂತಿಯೆಂಬುದು. ಇದನ್ನು ತಿಳಿಯಬೇಕೆಂತ ಹೇಳುತ್ತಾರೆ.

॥ ಶ್ರೀಗೋಪಾಲಕೃಷ್ಣಾಯ ನಮಃ ॥

ರಾಗ ಶಂಕರಾಭರಣ, ಏಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಶ್ರೀತರುಣಿವಲ್ಲಭನ ಪರಮ ವಿ- । ಭೂತಿರೂಪವ ಕಂಡಕಂಡ- । ಲ್ಲೀತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ ॥ ನೀತಸಾಧಾರಣವಿಶೇಷಸ- । ಜಾತಿನೈಜಾಹಿತವು ಸಹಜ ವಿ- । ಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದಾ ॥ ೧ ॥

ಜಲಧರಾಗಸದೊಳಗೆ ಚರಿಸುವ । ಹಲವು ಜೀವರ ನಿರ್ಮಿಸಿಹನದ- । ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ ॥ ತಿಳಿದು ತತ್ತತ್ ಸ್ಥಾನದಲಿ ವೆ- । ಗ್ಗಳಿಸಿ ಹಬ್ಬಿದ ಮನದಿ ಪೂಜಿಸು- । ತ ಲವವ್ಯಾಪ್ತನ ರೂಪಗಳ ನೋಡುತಲೆ ಹಿಗ್ಗುತಿರು ॥ ೨ ॥

ಪ್ರತಿಮೆ ಸಾಲಗ್ರಾಮ ಗೋಽಭ್ಯಾ- । ಗತ ಅತಿಥಿ ಶ್ರೀತುಲಸಿ ಪಿಪ್ಪಲ । ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರಜನಾ ॥ ಪೃಧಿವಿಜಲಶಿಖಿಪವನತಾರಾ । ಪಥನವಗ್ರಹಯೋಗಕರಣಭ । ತಿಥಿಸಿತಾಸಿತಪಕ್ಷಸಂಕ್ರಮಣವನಧಿಷ್ಠಾನ ॥ ೩ ॥

ಕಾದ ಕಾಂಚನದೊಳಗೆ ಶೋಭಿಪ। ಆದಿತೇಯಾಸ್ಯನ ತೆರದಿ ಲ-। ಕ್ಷ್ಮೀಧವನು ಪ್ರತಿದಿನದಿ ಸಾಲಗ್ರಾಮದೊಳಗಿಪ್ಪ॥ ಐದುಸಾವಿರ ಮೇಲೆ ಮುಪ್ಪ-। ತ್ತೈದಧಿಕ ಐನೂರು ರೂಪದಿ। ಭೂಧರಗಳಭಿಮಾನಿ ದಿವಿಜ ರೊಳಿಪ್ಪನನವರತ ॥ ೪ ॥

ಶ್ರೀರಮಣ ಪ್ರತಿಮೆಗಳೊಳಗೆ ಹದಿ-। ಮೂರಧಿಕವಾಗಿಪ್ಪ ನೇಲ್ನೈ-। ನೂರುರೂಪವ ಧರಿಸಿ ಯಿಪ್ಪನು ಆ ಹುತಾಶನದಿ॥ ದಾರು ಮಥನವ ಗೈಯೆ ಪಾವಕ। ತೋರುವಂತೆ ಪ್ರತೀಕಸುರರೂಪು। ತೋರು ತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ ॥ ೫ ॥

ಕರಣನೀಯಾಮಕನು ತಾನುಪ-। ಕರಣದೊಳಗೈವತ್ತೆರಡು ಸಾ-। ವಿರದ ಹದಿನಾಲ್ಕಧಿಕಶತರೂಪಂಗಳನೆ ಧರಿಸಿ॥ ಇರುತಿಹನು ತದ್ರೂಪನಾಮಗ-। ಳರಿತು ಪೂಜಿಸುತಿಹರ ಪೂಜೆಯ। ನಿರತ ಕೈ ಗೊಂಬನು ತೃಷಾರ್ತನು ಜಲವ ಕೊಂಬಂತೆ ॥ ೬ ॥

ಬಿಂಬರೂಪನು ಈ ತೆರದಿ ಜಡ। ವೊಂಬಸಿರ ಮೊದಲಾದ ಸುರರೊಳ-। ಗಿಂಬುಗೊಂಡಿಹನೆಂದರಿದು ಧರ್ಮಾರ್ಥಕಾಮಗಳ॥ ಹಂಬಲಿಸದನುದಿನದಿ ವಿಶ್ವಕು-। ಟುಂಬಿ ಕೊಟ್ಟ ಕದನ್ನಕುತ್ಸಿತ। ಕಂಬಳಿಯೆ ಸೌಭಾಗ್ಯವೆಂದವನಂಘ್ರಿಗಳ ಭಜಿಸು ॥ ೭ ॥

ವಾರಿಯೊಳಗಿಪ್ಪತ್ತನಾಲಕು। ಮೂರೆರಡುಸಾವಿರದ ಮೇಲ್ಮೂ। ನ್ನೂರು ಹದಿನೇಳೆನಿಪ ರೂಪವು ಶ್ರೀತುಲಸಿದಳದಿ॥ ನೂರ ಆರವ ತ್ತೊಂದು ಪುಷ್ಪದಿ। ಮೂರಧಿಕದಶ ದೀಪದೊಳು ನಾ-। ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು ॥ ೮ ॥

ಅಷ್ಟದಳಸದ್ಧೃದಯಕಮಲಾ-। ಧಿಷ್ಠಿತನು ತಾನಾಗಿ ಸರ್ವೋ-। ತ್ಕೃಷ್ಟಮಹಿಮನು ದಳಗಳಲಿ ಸಂಚರಿಸುತೊಳಗಿದ್ದು॥ ದುಷ್ಟರಿಗೆ ದುರ್ಬು ದ್ಧಿಕರ್ಮವ। ಶಿಷ್ಟರಿಗೆ ಸುಜ್ಞಾನಧರ್ಮ ಸು-। ಪುಷ್ಟಿಗೈಸುತ ಸಂತ ಯಿಪ ನಿರ್ದುಷ್ಟ ಸುಖಪೂರ್ಣ ॥ ೯ ॥

ವಿತ್ತದೇಹಾಗಾರದಾರಾ- । ಪತ್ಯಮಿತ್ರಾದಿಗಳೊಳಗೆ ಗುಣ । ಚಿತ್ತ ಬುದ್ಧ್ಯಾದಿಂದ್ರಿಯಗಳೊಳು ಜ್ಞಾನಕರ್ಮದೊಳು ॥ ತತ್ತದಾಹ್ವಯನಾಗಿ ಕರೆಸುತ । ಸತ್ಯಸಂಕಲ್ಪಾನುಸಾರದಿ । ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುತಿರು ॥ ೧೦ ॥

ಭಾವದ್ರವ್ಯಕ್ರಿಯೆಗಳೆನಿಸುವ । ಈವಿಧಾದ್ವೈತತ್ರಯಂಗಳ । ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ ॥ ತಾವಕನು ತಾನೆಂದು ಪ್ರತಿದಿನ । ಸೇವಿಸುವ ಭಕ್ತರಿಗೆ ತನ್ನನು । ಈವ ಕಾವ ಕೃಪಾಳು ಕರಿವರಗೊಲಿದ ತೆರದಂತೆ ॥ ೧೧ ॥

ಬಾಂದಳವೆ ಮೊದಲಾದುದರೊಳೊಂ- । ದೊಂದರಲಿ ಪೂಜಾಸುಸಾಧನ- । ವೆಂದೆನಿಸುವ ಪದಾರ್ಥಗಳು ಬಗೆಬಗೆಯ ನೂತನದಿ ॥ ಸಂದಣಿಸಿಕೊಂಡಿಹವು ಧ್ಯಾನಕೆ । ತಂದನಿತು ಚಿಂತಿಸಿ ಸದಾ ಗೋ- । ವಿಂದನರ್ಚಿಸಿ ನೋಡು ನಲಿನಲಿದಾಡು ಕೊಂಡಾಡು ॥ ೧೨ ॥

ಜಲಜನಾಭನ ಮೂರ್ತಿ ಮನದಲಿ । ನೆಲೆಗೊಳಿಸಿ ನಿಶ್ಚಲಭಕುತಿಯಲಿ । ಛಳಿಬಿಸಿಲುಮಳೆಘಾಳಿಗಳ ನಿಂದಿಸದೆ ನಿತ್ಯದಲಿ ॥ ನೆಲದಲಿಹ ಗಂಧವೆ ಸುಗಂಧವು । ಜಲವೆ ರಸ ರೂಪವೆ ಸುದೀಪವು । ಎಲರು ಚಾಮರ ಶಬ್ದವಾದ್ಯಗಳರ್ಪಿಸಲು ಪೊಲಿವ ॥ ೧೩ ॥

ಗೋಳಕಗಳು ರಮಾರಮಣನ ನಿ- । ಜಾಲಯಗಳನುದಿನದಿ ಸಂಪ್ರ- । ಕ್ಷಾಲನೆಯೆ ಸಮ್ಮಾರ್ಜನವು ಕರಣಗಳೆ ದೀಪಗಳು ॥ ನಾಲು ತತ್ತದ್ವಿಷಯಗಳ ಸ- । ಮ್ಮೇಳನವೆ ಪರಿಯಂಕ ತತ್ಸುಖ- । ದೇಳಿಗೆಯೆ ಸುಪ್ತಿಗಾತ್ಮನಿವೇದನವೆ ವಸನ ॥ ೧೪ ॥

ಪಾಪಕರ್ಮವು ಪಾದುಕೆಗಳನು- । ಲೇಪನವು ಸತ್ಪುಣ್ಯಶಾಸ್ತ್ರಾ- । ಲಾಪನವೆ ಶ್ರೀತುಲಸಿಸುಮನೋವೃತ್ತಿಗಳು ಸುಮನ ॥ ಕೋಪಧೂಪವು ಭಕ್ತಿ ಭೂಷಣ । ವ್ಯಾಪಿಸಿದ ಸದ್ಬುದ್ಧಿಛತ್ರವು । ದೀಪವೇ ಸುಜ್ಞಾನವಾರಾರ್ತಿಗಳೆ ಗುಣಕಥನ ॥ ೧೫ ॥

ಮನವಚನಕಾಯಿಕಪ್ರದಕ್ಷಿಣೆ- । ಯನುದಿನದಿ ಸರ್ವತ್ರ ವ್ಯಾಪಕ । ವನರುಹೇಕ್ಷಣಗರ್ಪಿಸುತ ಮೋದಿಸುತಲಿರು ಸತತ ॥ ಅನುಭವಕೆ ತಂದುಕೊ ಸಕಲ ಸಾ- । ಧನಗಳೊಳಗಿದೆ ಮುಖ್ಯ ಪಾಮರ । ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ ॥ ೧೬ ॥

ಚತುರವಿಧ ಪುರುಷಾರ್ಥ ಪಡೆವರೆ । ಚತುರದಶ ಲೋಕಗಳ ಮಧ್ಯದೊ- । ಳಿತರುಪಾಯಗಳಿಲ್ಲ ನೋಡಲು ಸಕಲಶಾಸ್ತ್ರದಲಿ ॥ ಸತತ ವಿಷಯೇಂದ್ರಿಯಗಳಲಿ ಪ್ರವಿ । ತತನೆನಿಸಿ ರಾಜಿಸುವ ಲಕ್ಷ್ಮೀ । ಪತಿಗೆ ಸರ್ವಸಮರ್ಪಣೆಯು ಮಹಪೂಜೆ ಸದುಪಾಯ ॥ ೧೭ ॥

ಗೋಳಕವೆ ಕುಂಡಾಗ್ನಿ ಕರಣವು । ಮೇಲೊದಗಿಬಹ ವಿಷಯ ಸಮಿಧೆಯು । ಘಾಳಿ ಯತ್ನವು ಕಾಮ ಧೂಮವು ಸನ್ನಿಧಾನಾರ್ಚೀ ॥ ಮೇಳನವೆ ಪ್ರಜ್ವಾಲೆ ಕಿಡಿಗಳು । ತೂಳಿದಾನಂದಗಳೆ ತತ್ತ- । ತ್ಕಾಲ ಮಾತುಗಳೆಲ್ಲ ಮಂತ್ರಾ ಧ್ಯಾತ್ಮಯಜ್ಞವಿದು ॥ ೧೮ ॥

ಮಧುವಿರೋಧಿಯ ಪಟ್ಟಣಕೆ ಪೂ- । ರ್ವದ ಕವಾಟಗಳಕ್ಷಿನಾಶಿಕ । ವದನಶ್ರೋತ್ರಗಳೆರಡು ದಕ್ಷಿಣ ಉತ್ತರದ್ವಾರ ॥ ಗುದವುಪಸ್ಥಗಳೆರಡು ಪಶ್ಚಿಮ । ಕದಗಳೆನಿಸವು ಷಟ್ಸರೋಜವೆ । ಸದನ ಹೃದಯವೆ ಮಂಟಪಂಗಳು ತ್ರಿಗುಣಗಳೆ ಕಲಶ ॥ ೧೯ ॥

ಧಾತುಗಳು ಸಪ್ತಾವರಣ ವುಪ- । ವೀಧಿಗಳೆ ನಾಡಿಗಳು ಮುಖ ಗಳು । ಯೂಥಪಗಳು ಸುಷುಮ್ನನಾಡಿಯೆ ರಾಜಪಂಥಾನ ॥ ಈತನೂರುಹಗಳೆ ವನಂಗಳು । ಮಾತರಿಶ್ವನು ಪಂಚರೂಪದಿ । ಪಾತಕಿಗಳೆಂಬರಿಗಳನು ಸಂಹರಿಪ ತಳವಾರ ॥ ೨೦ ॥

ಇನಶಶಾಂಕಾದಿಗಳು ಲಕ್ಷ್ಮೀ । ವನಿತೆಯರಸನ ದ್ವಾರಪಾಲಕ- । ರೆನಿಸುತಿಪ್ಪರು ಮನದ ವೃತ್ತಿಗಳೇ ಪದಾತಿಗಳು ॥ ಅನುಭವಿಪ ವಿಷಯಂಗಳೇ ಪ- । ಟ್ಟಣಕೆ ಬಪ್ಪ ಪಸಾರಗಳು ಜೀ- । ವನು ಸುವರ್ತಕ ಕಪ್ಪಗಳ ಕೈಕೊಂಬ ಹರಿ ತಾನು ॥ ೨೧ ॥

ಉರುಪರಾಕ್ರಮನರಮನೆಗೆ ದಶ । ಕರಣಗಳ ಕನ್ನಡಿಯ ಸಾಲುಗ- । ಳರವಿದೂರನ ಸದ್ವಿಹಾರಕೆ ಚಿತ್ರಮಂಟಪವೂ ॥ ಮರಳಿ ಬೀಸುವ ಶಾಸ್ತ್ರಗಳು ಚಾ- । ಮರ ವಿಲಾಸಿಸಿ ಬುದ್ಧಿ ದಾವೋ- । ದರಗೆ ಸಾಷ್ಟಾಂಗ ಪ್ರಣಾಮಗಳೇ ಸುಶಯನಗಳೂ ॥ ೨೨ ॥

ಮಾರಮಣನರಮನೆಗೆ ಸುಮುಖಾ- । ದ್ವಾರವೆನಿಸುವ ವದನ ಕೊಪ್ಪುವ । ತೋರಣ ಶ್ಮಶ್ರುಗಳು ಕೇಶಗಳೇ ಪತಾಕಿಗಳೂ ॥ ಊರಿ ನಡೆವಂಘ್ರಿಗಳು ಜಂಘೆಗ- । ಳೂರುಮಧ್ಯೋದರಶಿರಗಳಾ- । ಗಾರದುಪ್ಪರಿಗೆಗಳು ಕೋಶಗಳೈದು ಕೋಣೆಗಳು ॥ ೨೩ ॥

ಈ ಶರೀರವೆ ರಥ ಪತಾಕ ಸು- । ವಾಸಗಳು ಪುಂಡ್ರಗಳು ಧ್ವಜಸಿಂ- । ಹಾಸನವು ಚಿತ್ತವು ಸುಬುದ್ಧಿಯು ಕಲಶ ಸನ್ಮನವೂ ॥ ಪಾಶ ಗುಣ ದಂಡತ್ರಯಗಳು ಶು- । ಭಾಶುಭದ್ವಯಕರ್ಮ ಚಕ್ರ ಮ- । ಹಾಸಮರ್ಥಾಶ್ವಗಳು ದಶಕರಣಂಗಳೆನಿಸುವವೂ ॥ ೨೪ ॥

ಮಾತರಿಶ್ವನು ದೇಹರಥದೊಳು । ಸೂತನಾಗಿಹ ಸರ್ವಕಾಲದಿ । ಶ್ರೀತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ ॥ ಪ್ರೀತಿಯಿಂದಲಿ ಪೋಷಿಸುವ ವಾ- । ತಾತಪಾದಿಗಳಿಂದಲವಿರತ । ಈ ತನುವಿನೊಳು ಮಮತೆ ಬಿಟ್ಟವನವನೆ ಮಹಯೋಗಿ ॥ ೨೫ ॥

ಭವವೆನಿಪ ವನಧಿಯೊಳು ಕರ್ಮ । ಪ್ರವಹದೊಳು ಸಂಚರಿಸುತಿಪ ದೇ- । ಹವೆ ಸುನಾವೆಯ ಮಾಡಿ ತನ್ನವರಿಂದಲೊಡಗೂಡಿ ॥ ದಿವಸದಿವಸಗಳಲ್ಲಿ ಲಕ್ಷ್ಮೀ । ಧವನು ಕ್ರೀಡಿಪನೆಂದು ಚಿಂತಿಸೆ । ಪವನನಯ್ಯ ಭವಾಬ್ಧಿ ದಾಟಿಸಿ ಪರಮಸುಖವೀವಾ ॥ ೨೬ ॥

ಆಪಣಾಲಯಗತಪದಾರ್ಥವು । ಸ್ತ್ರೀಪುರುಷರುಗಳಿಂದ್ರಿಯಗಳಲಿ । ದೀಪಪಾವಕರೊಳಿಡುತಿಹ ತೈಲಾದಿದ್ರವ್ಯಗಳಾ ॥ ಆ ಪರಮಗವದಾನವೆಂದು ಪ- । ದೇಪದೇ ಮರೆಯದಲೆ ಸ್ಮರಿಸುತ । ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ॥ ೨೭ ॥

ವಾರಿಜಭವಾಂಡವೆ ಸುಮಂಟಪ । ಮೇರುಗಿರಿ ಸಿಂಹಾಸನವು ಭಾ- । ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿ ಮಂತ್ರಾ ॥ ಭೂರು ಹಜಫಲಪುಷ್ಪಗಂಧಸ- । ವಿೂರ ಶಶಿರವಿ ದೀಪ ಭೂಷಣ । ತಾರಕೆಗ ಳೆಂದರ್ಪಿಸಲು ಕೈಗೊಂಡು ಮನ್ನಿಸುವ ॥ ೨೮ ॥

ಭೂಸುರರೊಳಿಪ್ಪಬ್ಜಭವನೊಳು । ವಾಸುದೇವನು ವಾಯುಖಗಪ ಸ- । ದಾಶಿವಹಿಪೇಂದ್ರಸು ವಿವಸ್ವನ್ಮಾನುಕಸ್ವಾಯರ್ಭು ॥ ಭೇಶಕಾಮುಮ ರಾಸ್ಯವರುಣಾ- । ದೀಸುರರು ಕ್ಷತ್ರಿಯರೊಳಿಪ್ಪರು । ವಾಸವಾಗಿಹ ಸಂಕ ರುಷಣನ ನೋಡಿ ಮೋದಿಪರು ॥ ೨೯ ॥

ವಿೂನಕೇತನತನಯ ಪ್ರಾಣಾ- । ಪಾನವ್ಯಾನೋದಾನಮುಖ್ಯ- । ಕೋನಪಂಚಾಶನ್ಮರುದ್ಗಣ ರುದ್ರ ವಸುಗಣರು ॥ ಮೀನಕಾತ್ಮಜಕುವರ ವಿಷ್ವ- । ಕ್ಸೇನ ಧನಪಾದ್ಯನಿಮಿಷರನ ಸ- । ದಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ ॥ ೩೦ ॥

ಇರುತಿಹರು ನಾಸತ್ಯದಸ್ರರು । ನಿರರುತಿಯು ಯಮಧರ್ಮ ಯಮಕಿಂ- । ಕರರು ಮೇದಿನಿ ಕಾಲಮೃತ್ಯು ಶನ್ಯೈಶ್ಚರಾದಿಗಳು ॥ ಕರೆಸಿ ಕೊಂಬರು ಶೂದ್ರರೆಂದನ- । ವರತ ಶೂದ್ರರೊಳಿಪ್ಪರಿವರೊಳ- । ಗರವಿ ದೂರನಿರುದ್ಧನಿಹನೆಂದರಿತು ಮನ್ನಿಪುದು ॥ ೩೧ ॥

ವೀತಭಯ ನಾರಾಯಣ ಚತುಃ- । ಪಾತು ತಾನೆಂದೆನಿಸಿ ತತ್ತ- । ಜ್ಜಾತಿಧರ್ಮಸುಕರ್ಮಗಳ ತಾ ಮಾಡಿ ಮಾಡಿಸುವಾ ॥ ಚೇತನರ ಒಳಹೊರಗೆ ವೋತ । ಪ್ರೋತನಾಗಿದ್ದೆಲ್ಲರಿಗೆ ಸಂ- । ಪ್ರೀತಿಯಲಿ ಧರ್ಮಾ ರ್ಥಕಾಮಾದಿಗಳ ಕೊಡುತಿಹನು ॥ ೩೨ ॥

ನಿಧನ ಧನದ ವಿಧಾತ ವಿಗತಾ- । ಧ್ಯಧಿಕ ಸಮಾಸಮವರ್ತಿ ಸಾಮಗ । ತ್ರಿದಶಗಣಸಂಪೂಜ್ಯ ತ್ರಿಕಕುಬ್ಧಾಮ ಶುಭನಾಮ ॥ ಮಧು ಮಥನ ಭೃಗುರಾಮ ಘೋಟಕ । ವದನ ಸರ್ವಪದಾರ್ಥದೊಳು ತುದಿ । ಮೊದಲು ತುಂಬಿಹನೆಂದು ಚಿಂತಿಸು ಬಿಂಬರೂಪದಲಿ ॥ ೩೩ ॥

ಕನ್ನಡಿಯು ಕೈವಿಡಿದು ನೋಡಲು । ತನ್ನಿರವು ಸವ್ಯಾಪಸವ್ಯದಿ । ಕಣ್ಣಿಗೊಪ್ಪುವ ತೆರದಿ ಅನಿರುದ್ಧನಿಗೆ ಈ ಜಗವು ॥ ಭಿನ್ನಭಿನ್ನವೆ ತೋರುತಿಪ್ಪುದು । ಜನ್ಯವಾದುದರಿಂದ ಪ್ರತಿಬಿಂ- । ಬನ್ನ ಮಯಗಾನೆಂದರಿದು ಪೂಜಿಸಲು ಕೈಕೊಂಬಾ ॥ ೨೪ ॥

ಬಿಂಬರೆನಿಪರು ಸ್ವೋತ್ತಮರು ಪ್ರತಿ । ಬಿಂಬರೆನಿಪರು ಸ್ವಾವರರು ಪ್ರತಿ । ಬಿಂಬಬಿಂಬಗಳೊಳಗೆ ಕೇವಲಬಿಂಬ ಹರಿಯೊಂದು ॥ ಸಂಭ್ರಮದಿ ಪಾಡುತಲಿ ನೋಡುತ- । ಲುಂಬುಡುವದಿಡುವದು ಕೊಡುವದೆ- । ಲ್ಲಂಬುಜಾಂಬಕನಂಘ್ರಿಪೂಜೆಗಳೆಂದು ನಲಿದಾಡು ॥ ೨೫ ॥

ನದಿಯ ಜಲ ನದಿಗೆರೆವ ತೆರದಂ- । ದದಲಿ ಭಗವದ್ದತ್ತಧರ್ಮಗ- । ಳುದಧಿಶಯನನಿಗರ್ಪಿಸುತ ವ್ಯಾವೃತ್ತ ನೀನಾಗಿ ॥ ವಿಧಿನಿಷೇಧಾದಿಗಳಿಗೊಳಗಾ- । ಗದಲೆ ಮಾಡುತ ದರ್ಪಯಿಂದದಿ । ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ॥ ೨೬ ॥

ಅರಿಯದಿರ್ದರು ಯೆಮ್ಮೊಳಿದ್ದನ- । ವರತವಿಷಯಗಳುಂಬ ಜ್ಞಾನೋ- । ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ॥ ಸರಿತುಕಾಲಪ್ರವಹಗಳು ಕಂ- । ಡರೆಯು ಸರಿ ಕಾಣದಿರೆ ಪರಿವವು । ಮರಳಿ ಮಜ್ಜನಪಾನಕರ್ಮಗಳಿಂದೆ ಸುಖವಿಹವೂ ॥ ೨೭ ॥

ಏನುಮಾಡುವ ಕರ್ಮಗಳು ಲ- । ಕ್ಷ್ಮೀನಿವಾಸನಿಗರ್ಪಿಸನುಸಂ- । ಧಾನಪೂರ್ವಕದಿಂದ ಸಂದೇಹಿಸದೆ ದಿನದಿನದಿ । ಮಾನನಿಧಿ ಕೈಗೊಂಡು ಸುಖವಿ- । ತ್ತಾನತರ ಸಂತೈಪ ತೃಣಜಲ । ಧೇನು ತಾನುಂಡನವರತ ಪಾಲ್ಗರೆವ ತೆರನಂತೆ ॥ ೨೮ ॥

ಪೂರ್ವದಕ್ಷಿಣಪಶ್ಚಿಮೋತ್ತರ । ಪಾರ್ವತೀಪತಿಯಗ್ನಿವಾಯುಸು- । ಶಾರ್ವರೀಕರದಿಗ್ವಲಯದೊಳು ಹಂಸನಾಮಕನು ॥ ಸಾರ್ವಕಾಲದಿ ಸರ್ವರೊಳು ಸುರ । ಸಾರ್ವಭೌಮನು ಸ್ವೇಚ್ಛೆಯಲಿ ಮ- । ತ್ತ್ಯೋರ್ವರಿಗೆ ಗೋಚರಿಸದವ್ಯಕ್ತಾತ್ಮನೆಂದೆನಿಸೀ ॥ ೨೯ ॥

ಪರಿಯಿಡಾವತ್ಸರನು ಸಂವ- । ತ್ಸರದೊಳನಿರುದ್ಧಾದಿರೂಪವ ।
ಧರಿಸಿ ಬಾರ್ಹಸ್ಪತ್ಯಸೌರಭ ಚಾಂದ್ರಮನು ಯೆನಿಸಿ ॥ ಇರುತಿಹ ಜಗ
ನ್ನಾಥ ವಿಟ್ಠಲ । ಸ್ಮರಿಸುವವರನ ಸಂತಯಿಸನೆಂ- । ದುರುಪರಾಕ್ರಮ
ಸುಚಿತಸಾಧನಯೋಗ್ಯತೆಯನರಿತು ॥ ೪೨ ॥

ಅಂತು ಸಂಧಿ ೫ಕ್ಕೆ ಪದ ೧೪೬ಕ್ಕೆ ವಿಭೂತಿಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

## ೬. ಪಂಚಾಗ್ನಿಹೋತ್ರಸಂಧಿ.

"ದ್ಯುಪರ್ಜನ್ಯ ಧರಾಪಂ ಸ್ತ್ರೀ" ಎಂಬ ಪಂಚಾಗ್ನಿಗಳಲ್ಲಿ ಮಾನಸಿಕ ಯಜ್ಞ ಮಾಡಬೇಕೆಂದು ಅಧಿಕಾರಿಗಳಿಗೆ ತಿಳಿಸುವುದಕ್ಕೋಸ್ಕರ ಈ ಸಂಧಿಯನ್ನು ಉಪಕ್ರಮಿಸುತ್ತಾರೆ. ಇದರಲ್ಲಿ ಸ್ಥೂಲದೇಹ ಉತ್ಪತ್ತಿ ವಿಚಾರವನ್ನೂ ಹೇಳುತ್ತಾರೆ.

॥ ಶ್ರೀವೇದವ್ಯಾಸಾಯ ನಮಃ ॥

ರಾಗ ಆನಂದಭೈರವಿ, ಮಟ್ಟಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಜನನಿ ಪಿತ ಭೂ ವಾರಿದಾಂಬರ- । ವೆನಿಪ ಪಂಚಾಗ್ನಿಯಲಿ
ನಾರಾ- । ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳಾ ॥
ನೆನೆದು ದಿವಸಗಳೆಂಬ ಸಮಿಧೆಗ- । ಳನು ನಿರಂತರ ಹೋಮಿಸುತ
ಪಾ- । ವನಕೆ ಪಾವನನೆನಿಪ ಪರಮನ ಬೇಡು ಪರಮಸುಖ ॥ ೧ ॥

ಗಗನ ಪಾವಕ ಸಮಿಧೆ ರವಿ ರ- । ಶ್ಮಿಗಳೆ ಧೂಮವು ಅರ್ಚಿ
ಯೆನಿಪುದೆ । ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರಾ ॥
ಮೃಗವರೋದರನೊಳಗೆ ಐರೂ- । ಪಗಳ ಚಿಂತಿಸಿ ಭಕ್ತಿರಸ ಮಾ- ।
ತುಗಳೆ ಮಂತ್ರವ ಮಾಡಿ ಹೋಮಿಸುವರು ವಿಪಶ್ಚಿತರು ॥ ೨ ॥

ಪಾವಕನು ಪರ್ಜನ್ಯ ಸಮಿಧೆಯು । ಪ್ರಾವಹೀಪತಿ ಧೂಮಗಳೆ ಮೇ- । ಘಾವಳಿಗಳರ್ಚಿ ಕ್ಷಣಪ್ರಭೆ ಗರ್ಜನವೆ ಕಿಡಿಯು ॥ ಭಾವಿಸುವದಂಗಾರ ಸಿಡಿಲೆಂ- । ದೀ ವಿಧಾಗ್ನಿಯೊಳಭ್ರಜಾತನ । ಕೋವಿದರು ಹೋಮಿಸುವರನುದಿನ ಪರಮ ಭಕುತಿಯಲೀ ॥ ೩ ॥

ಧರಣಿಯೆಂಬುದೆ ಅಗ್ನಿ ಸಂವ- । ತ್ಸರವೆ ಸಮಿಧೆ ವಿಹಾಯಸವೆ ಹೊಗೆ । ಇರುಳುರಿ ದಿಶಾಂಗಾರನಾಂತರದಿಗ್ವಲಯ ಕಿಡಿಯು ॥ ವರುಷವೆಂಬಾಹುತಿಗಳಿಂದಲಿ । ಹರಿಯ ಮೆಚ್ಚಿಸಿ ಸಕಲರೊಳಗ- । ಧ್ವರಿಯನಾಗಿರು ಸರ್ವರೂಪಾತ್ಮಕನ ಚಿಂತಿಸುತ ॥ ೪ ॥

ಪುರುಷ ಶಿಖಿ ವಾಕ್ಸಮಿಧೆ ಧೂಮವು । ಕರಣ ಅರ್ಚಿಯು ಜಿಹ್ವೆ ಶ್ರೋತ್ರಗ- । ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವವು ॥ ನಿರುತ ಬುಂಜಿಸುವನ್ನ ಯಮಕುಲ । ವರನಿಗವದಾನಗಳುಯೆಂದೀ- । ಪರಿ ಸಮರ್ಪಣೆಗೈಯೆ ಕೈಕೊಂಡನುದಿನದಿ ಪೊರೆವ ॥ ೫ ॥

ಮತ್ತೆ ಯೋಷಾಗ್ನಿಯಲಿ ತಿಳಿವುದು- । ಪಸ್ಥತತ್ವವೆ ಸಮಿಧೆ ಕಾಮವೋ- । ತ್ಪತ್ತಿಪರ ಮಾತುಗಳೆ ಧೂಮವು ಯೋನಿಮಹದರ್ಚೀ ॥ ತತ್ಪ್ರವೇಶಾಂಗಾರ ಕಿಡಿಗಳು । ಉತ್ಸಹಗಳುತ್ಸರ್ಜನವು ಪುರು- । ಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ ॥ ೬ ॥

ಐದು ಅಗ್ನಿಗಳಲ್ಲಿ ಮರೆಯದೆ । ಐದು ರೂಪಾತ್ಮಕನ ಯಿಪ್ಪ- । ತ್ತೈದುರೂಪಗಳನುದಿನದಿ ನೆನೆವರಿಗೆ ಜನ್ಮಗಳ ॥ ಐದಿಸನು ನಳಿನಾಕ್ಷ ರಣದೊಳು । ಮೈದುನನ ಕಾಯ್ದಂತೆ ಸಲಹುವ । ಬೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು ॥ ೭ ॥

ಪಂಚನಾರೀತುರಗದಂದದಿ । ಪಂಚರೂಪಾತ್ಮಕನು ತಾ ಷ- । ಟ್ಪಂಚ ರೂಪವ ಧರಿಸಿ ತತ್ತನ್ನಾಮದಿಂ ಕರೆಸಿ ॥ ಪಂಚಪಾವಕ ಮುಖದಿ ಗುಣಮಯ । ಪಂಚಭೂತಾತ್ಮಕ ಶರೀರವ । ಪಂಚವಿಧಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು ॥ ೮ ॥

ವಿಧಿಭವಾದಿಸಮಸ್ತಜೀವರ । ಹೃದಯದೊಳಗೇಕಾತ್ಮನೆನಿಸುವ । ಪದುಮನಾಭನು ಅಚ್ಯುತಾದಿ ಅನಂತ ರೂಪದಲಿ ॥ ಅಧಿಸುಭೂತಾಧ್ಯಾತ್ಮವಧಿದೈ- । ವದೊಳು ಕರೆಸುವ ಪ್ರಾಣನಾಗಾ- । ಭಿಧನು ದಶರೂಪದಲಿ ದಶವಿಧಪ್ರಾಣರೊಳಗಿದ್ದು ॥ ೯ ॥

ಈರೆರಡುಸಾವಿರದ ಯಿಪ್ಪ- । ತ್ತಾರಧಿಕ ಮುನ್ನೂರು ರೂಪಗ- । ಳೀರೆರಡು ಸ್ಥಾನದಲಿ ಚಿಂತಿಪುದನುದಿನದಿ ಬುಧರು ॥ ನೂರಯಿಪ್ಪತ್ತೇಳಧಿಕ ಮೂ- । ರಾರುಸಾವಿರ ರೂಪದಿಂ ದಶ । ಮಾರುತನೊಳಿದ್ದವರ ವರ ಪೆಸರಿಂದ ಕರೆಸುವನು ॥ ೧೦ ॥

ಚಿತ್ತವಿಸುವುದು ಯೆಂಟಧಿಕ ಯಿ- । ಪ್ಪತ್ತು ಸಾವಿರ ನಾಲ್ಕು ಶತ ದೈ- । ವತ್ತುಮೂರು ಸುಮೂರ್ತಿಗಳು ಅಹವಿಲ್ಲಿ ಪರಿಯಂತಾ ॥ ಹತ್ತು ನಾಲಕು ರೂಪಗಳ ನೆರೆ । ಬಿತ್ತರವನೀಪರಿ ತಿಳಿದು ಪುರು- । ಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು ॥ ೧೧ ॥

ಈರೆರಡು ಶತ ದ್ವ್ಯಷ್ಟಧಿಕ ಹದಿ- । ನಾರುಸಾವಿರ ರೂಪ ಸರ್ವಶ- । ರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ ॥ ಮಾರುತನ ನಾಗಾದಿರೂಪದಿ । ಮೂರನೇ ಗುಣಮಾನಿ ಶ್ರೀದು- । ರ್ಗಾರಮಣ ವಿದ್ಯಾಖ್ಯ ಮೋಹವ ಕೊಡುವ ಕರಣಕ್ಕೆ ॥ ೧೨ ॥

ಐದು ವಿದ್ಯೆಗಳೊಳಗೆ ಇಹ ನಾ- । ಗಾದಿಗಳಧಿಷ್ಠಾನದಲಿ ಲ- । ಕ್ಷ್ಮೀಧವನು ಕೃದ್ಧೋಲ್ಕ ಮೊದಲಾದೈದು ರೂಪಗಳ ॥ ತಾ ಧರಿಸಿ ಸಜ್ಜನರ ವಿದ್ಯೆಯ । ಭೇದಿಸುವ ತಾಮಸರಿಗಜ್ಞಾ- । ನಾದಿಗಳ ಕೊಟ್ಟವರವರ ಸಾಧನವ ಮಾಡಿಸುವ ॥ ೧೩ ॥

ಗೋವುಗಳೊಳುದ್ಗೀಥನಿಹ ಪ್ರ- । ಸ್ತಾವಹಿಂಕಾರೆರಡು ರೂಪದ- । ಲಾವಿಯಜಗಳೊಳಿಹನು ಪ್ರತಿಹಾರಾಹ್ವ ಹಯಗಳೊಳೂ ॥ ಜೀವನಪ್ರದ ನಿಧನ ಮನುಜರೊ- । ಳೀವಿಧದೊಳಿಹ ಪಂಚಸಾಮವ । ಝಾವಝಾವಕೆ ನೆನೆವರಿಗೆ ಐದಿಸನು ಜನ್ಮಗಳಾ ॥ ೧೪ ॥

ಯುಗಚತುಷ್ಟಯುಗಳಲಿ ತಾನಿ- । ದ್ಯುಗಪ್ರವರ್ತಕ ಧರ್ಮಕ ರ್ಮಗ- । ೞಗೆ ಪ್ರವರ್ತಕ ವಾಸುದೇವಾದೀರೆರಡು ರೂಪ ॥ ತೆಗೆದು ಕೊಂಡು ಯುಗಾದಿಕ್ರತು ತಾ । ಯುಗಪ್ರವರ್ತಕನೆನಿಸಿ ಧರ್ಮ । ಪ್ರಘ ಟಕನು ತಾನಾಗಿ ಭಕ್ತರಿಗೀವ ಸಂಪದವ ॥ ೧೫ ॥

ತಲೆಯೊಳಿಹ ನಾರಾಯಣನು ಗಂ- । ಟಲೆಡೆ ಪೃಡಲೊಳು ವಾಸು ದೇವನು । ಬಲದಲಿಹ ಪ್ರದ್ಯುಮ್ನನೆಡಭಾಗದೊಳಗನಿರುದ್ಧಾ ॥ ಕೆಳ ಗಿನಂಗದಿ ಸಂಕರುಷಣನ । ತಿಳಿದು ಈಪರಿ ಸಕಲ ದೇಹಗ- । ಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು ॥ ೧೬ ॥

ತನುವಿಶಿಷ್ಟದಿ ಇಪ್ಪ ನಾರಾ- । ಯಣನು ಕಟಿಪಾದಾಂತ ಸಂಕ ರು । ಷಣನು ಶಿರಜಘನಾಂತವಾಗಿಹ ವಾಸುದೇವಾಖ್ಯ ॥ ಅನಿಮಿಷೇ ಶನಿರುದ್ಧ ಪ್ರದ್ಯು- । ಮ್ನನು ಯೆಡದಿ ಬಲಭಾಗದಲಿ ಚಿಂ- । ತನೆಯ ಮಾಳ್ಪರಿಗುಂಟೆ ವ್ಯಲಿಗೆ ವಿಧಿನಿಷೇಧಗಳೂ ॥ ೧೭ ॥

ಪದುಮನಾಭನು ಪಾಣಿಯೊಳಗಿಹ । ವದನದಲಿ ಹೃಷಿಕೇಶ ನಾಸಿಕ । ಸದನದಲಿ ಶ್ರೀಧರನು ಜಿಹ್ವೆಯೊಳಿಪ್ಪ ವಾಮನನೂ ॥ ಮೃದು ಳತ್ವಗ್ದೇಶದಿ ತ್ರಿವಿಕ್ರಮ । ಮಧುವಿರೋಧಿಯು ಲೋಚನದಿ ಕ- । ರ್ಣ ದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ ೧೮ ॥

ಮನದೊಳಿಹ ಗೋವಿಂದ ಮಾಧವ । ಧನಪಸಖ ತತ್ವದೊಳು ನಾರಾ- । ಯಣನು ಮಹತತ್ವದೊಳು ಅವ್ಯಕ್ತದೊಳು ಕೇಶವನು ॥ ಇನಿತು ರೂಪವ ದೇಹದೊಳು ಚಿಂ- । ತನೆಯ ಗೈವ ಮಹಾತ್ಮರಿಳೆ ಯೊಳು । ಮನುಜರಲ್ಲವರಮರರೇ ಸರಿ ಹರಿಕೃಪಾಬಲದಿ ॥ ೧೯ ॥

ನೆಲದೊಳಿಪ್ಪನು ಕೃಷ್ಣರೂಪದಿ । ಜಲದೊಳಿಪ್ಪನು ಹರಿಯೆನಿಸಿ ಶಿಖಿ- । ಯೊಳಗೆ ಇಪ್ಪನು ಪರಶುರಾಮನುಪೇಂದ್ರನೆಂದೆನಿಸಿ ॥ ಎಲರೊ ಳಿಪ್ಪ ಜನಾರ್ದನನು ಬಾಂ- । ದಳದೊಳಚ್ಯುತ ಗಂಧ ನರಹರಿ । ಪೊಳೆವ ಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥ ೨೦ ॥

ರೂಪ ಪುರುಷೋತ್ತಮನು ಸ್ಪರ್ಶ । ಪ್ರಾಪಕನು ಅನಿರುದ್ಧ ಶಬ್ದದಿ । ವ್ಯಾಪಿಸಿಹ ಪ್ರದ್ಯುಮ್ನಪಸ್ಥದಿ ವಾಸುದೇವನಿಹಾ । ತಾ ಪ್ಪೊಳಿವ ವಾಯುಸ್ಥನಾಗಿ ಜ- । ಯಾಪತಿಯು ಸಂಕರುಷಣನು ಸು- । ಸ್ಥಾಪಕನು ಅಹ ಪಾದದೊಳು ದಾಮೋದರನು ಪೊಳೆವ ॥ ೨೧ ॥

ಚತುರವಿಂಶತಿ ತತ್ತ್ವದೊಳು ಶ್ರೀ । ಪತಿಯೆ ಅನಿರುದ್ಧಾದಿ ರೂಪದಿ । ವಿತತನಾಗಿದ್ದಖಿಳಜೀವರ ಸಂಹನನದೊಳಗೆ ॥ ವ್ರತತಿಯಂ ದದಿ ಸುತ್ತಿಸುತ್ತುತ । ಪಿತೃಗಳಿಗೆ ತರ್ಪಕನೆನಿಸಿಕೊಂ- । ಡತುಳಮಹಿ ಮನು ಷಣ್ಣವತಿ ನಾಮದಲಿ ನೆಲಸಿಹನೂ ॥ ೨೨ ॥

ಚತುರವಿಂಶತಿ ತತ್ತ್ವದೊಳು ತ- । ತ್ಪತಿಗಳೆನಿಸುವ ಬ್ರಹ್ಮಮುಖ ದೇ- । ವತೆಗಳೊಳು ಹನ್ನೊಂದುನೂರೈವತ್ತೆರಡುರೂಪಾ ॥ ವಿತತನಾಗಿ ರ್ದ್ದೆಲ್ಲ ಜೀವರ । ಜತನಮಾಡುವಗೋಸುಗ ಜಗ- । ತ್ಪತಿಗೆ ಯೇನಾ ದರು ಪ್ರಯೋಜನವಿಲ್ಲವಿದರಿಂದ ॥ ೨೩ ॥

ಇಂದಿರಾಧವ ಶಕ್ತಿಮೊದಲಾ- । ದೊಂದಧಿಕದಶರೂಪದಿಂದಲಿ । ಹೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು ॥ ಸುಂದರ ಪ್ರದ ಪೂರ್ಣಜ್ಞಾನಾ- । ನಂದಮಯ ಚಿದ್ದೇಹದೊಳು ತಾ- । ನೊಂದರೆ ಕ್ಷಣವಗಲದಲೆ ಪರಮಾಪ್ತನಾಗಿಪ್ಪ ॥ ೨೪ ॥

ಆರಧಿಕ ದಶರೂಪದಿಂದಲಿ । ತೋರುತಿಪ್ಪನು ವಿಶ್ವಲಿಂಗಶ- । ರೀರದೊಳು ತೈಜಸನು ಪ್ರಾಜ್ಞನು ತುರ್ಯನಾಮಕನು ॥ ಮೂರಯಿದು ರೂಪಗಳ ಧರಿಸುತ । ಲೀರಯಿದು ಕರಣದೊಳು ಮಾತ್ರದಿ । ಖೇರಶಿಖಿಜಲ ಭೂಮಿಯೊಳಗಿಹ ಆತ್ಮನಾಮದಲಿ ॥ ೨೫ ॥

ಮನದೊಳಾಹಂಕಾರದೊಳು ಚಿಂ- । ತನೆಯ ಮಾಳ್ಪದು ಅಂತ ರಾತ್ಮನ । ಘನಸುತತ್ತ್ವದಿ ಪರಮನವ್ಯಕ್ತದಲಿ ಜ್ಞಾನಾತ್ಮಾ ॥ ಇನಿತು ಪಂಚಾಶದ್ವರಣವೇ- । ದ್ಯನ ಅಜಾದ್ಯೈವತ್ತು ಮೂರ್ತಿಗ- । ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು ॥ ೨೬ ॥

ಚತುರವಿಂಶತಿ ತತ್ತ್ವದೊಳು ತ-। ತ್ಪತಿಗಳೆನಿಸುವ ಬ್ರಹ್ಮಮುಖ ದೇ-। ವತೆಗಳೊಳು ಹದಿಮೂರುಸಾವಿರದೆಂಟನೂರಧಿಕ ॥ ಚತುರವಿಂಶತಿ ರೂಪದಿಂದಲಿ। ವಿತತನಾಗಿಪ್ಪೆಲ್ಲರೊಳು ಪ್ರಾ-। ಕೃತಪುರುಷನಂದದಲಿ ಪಂಚಾತ್ಮಕನು ರಮಿಸುವನು ॥ ೨೭ ॥

ಕೇಶವಾದಿಸುಮೂರ್ತಿ ದ್ವಾದಶ। ಮಾಸ ಪುಂಡ್ರಗಳಲ್ಲಿ ವೇದ-। ವ್ಯಾಸನನಿರುದ್ಧಾದಿರೂಪಗಳಾರು ಋತುಗಳಲಿ ॥ ವಾಸವಾಗಿಹವೆಂದು ತ್ರಿಂಶತಿ। ವಾಸರದಿ ಸತ್ಕರ್ಮಧರ್ಮ ನಿ-। ರಾಶೆಯಿಂದಲಿ ಮಾಡು ಕರುಣವ ಬೇಡು ಕೊಂಡಾಡು ॥ ೨೮ ॥

ಲೋಷ್ಟಕಾಂಚನಲೋಹಶೈಲಜ। ಕಾಷ್ಠ ಮೊದಲಾದಖಿಳ ಜಡ ಪರ-। ಮೇಷ್ಠಿ ಮೊದಲಾದಖಿಳಚೇತನರೊಳಗೆ ಅನುದಿನವೂ ॥ ಚೇಷ್ಟೆಗಳ ಮಾಡಿಸುತ ತಿಳಿಸದೆ। ಪ್ರೇಷ್ಠನಾಗಿಪ್ಪೆಲ್ಲರಿಗೆ ಸ-। ರ್ವೇಷ್ಟದಾಯಕ ಸಂತವಿಸುವನು ಸರ್ವಜೀವರನು ॥ ೨೯ ॥

ವಾಸುದೇವನಿರುದ್ಧರೂಪದಿ। ಪುಂಶರೀರದೊಳಿಹನು ಸರ್ವದ। ಸ್ತ್ರೀಶರೀರವೊಳಿಹನು ಸಂಕರುಷಣನು ಪ್ರದ್ಯುಮ್ನ ॥ ದ್ವಾಸುಪರ್ಣಶ್ರುತಿ ವಿನುತ ಸ-। ರ್ವಾಸುನಿಲಯ ನಾರಾಯಣನ ಸದು-। ಪಾಸನೆಯ ಗೈವವರೆ ಜೀವನ್ಮುಕ್ತರೆನಿಸುವರು ॥ ೩೦ ॥

ತನ್ನನಂತಾನಂತರೂಪ ಹಿ-। ರಣ್ಯಗರ್ಭಾದಿಗಳೊಳಗೆ ಕಾ-। ರುಣ್ಯಸಾಗರ ಹರಹಿ ಅವರವರಖಿಳ ವ್ಯಾಪಾರ ॥ ಬನ್ನಬಡದಲೆ ಮಾಡಿ ಮಾಡಿಸಿ। ಧನ್ಯರೆನಿಸಿ ಸಮಸ್ತ ದಿವಿಜರ। ಪುಣ್ಯಕರ್ಮವ ಸ್ವೀಕರಿಸಿ ಫಲವಿತ್ತು ಪಾಲಿಸುವ ॥ ೩೧ ॥

ಸಾಗರದೊಳಿಹ ನದಿಯ ಜಲಭೇ-। ದಾಗಸದೊಳಿಪ್ಪಬ್ದ ಬಲ್ಲವು। ಕಾಗೆ ಗುಬ್ಬಿಗಳರಿಯಬಲ್ಲವೆ ನದಿಯ ಜಲಸ್ಥಿತಿಯ ॥ ಭೋಗಿವರಪರ್ಯಂಕ ಶಯನನೊ-। ಳೀಗುಣತ್ರಯ ಬದ್ಧಜಗವಿಹು-। ದಾಗಸುಜ್ಞರು ತಿಳಿವರಜ್ಞಾನಿಗಳಿಗಳವಡದು ॥ ೩೨ ॥

ಕರಣಗುಣಭೂತಗಳೊಳಗೆ ತ- । ದ್ವರರೆನಿಪ ಬ್ರಹ್ಮಾದಿದಿವಿಜ ರೊ- । ಳರಿತು ರೂಪಚತುಷ್ಟಯಗಳನುದಿನದಿ ಸರ್ವತ್ರ ॥ ಸ್ಮರಿಸುತನು ಮೋದಿಸುತ ಹಿಗ್ಗುತ । ಪರವಶದಿ ಹಾಡುವವರಿಗೆ ತ- । ನ್ನಿರವ ತೋರಿಸಿ ಭವವಿಮುಕ್ತರ ಮಾಡಿ ಪೋಷಿಸುವಾ ॥ ೩೩ ॥

ಮೂಲರೂಪನು ಮನದೊಳಹ ಶ್ರವ- । ಣಾಲಿಯೊಳಗಿಹ ಮತ್ಸ್ಯ ಕೂರ್ಮನು । ಕೋಲರೂಪನು ತ್ವಗ್ರಸನದೊಳಗಿಪ್ಪ ನರಸಿಂಹ ॥ ಬಾಲವಟು ವಾಮನನು ನಾಸಿಕ । ನಾಳದೊಳು ವದನದಲಿ ಭಾರ್ಗವ । ವಾಲಿಭಂಜನ ಹಸ್ತದೊಳು ಪಾದದಲಿ ಶ್ರೀಕೃಷ್ಣ ॥ ೩೪ ॥

ಜಿನವಿಮೋಹಕ ಬುದ್ಧ ಪಾಯುಗ । ದನುಜಭಂಜನ ಕಲ್ಕಿ ಮೇಢ್ರದಿ । ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು ॥ ಅನುಭವಿಪ ವಿಷಯಗಳ ಕೃಷ್ಣಾ- । ರ್ಪಣವೆನಲು ಕೈಗೊಂಬ ವೃಜಿನಾ- । ರ್ದನ ವರಜಗನ್ನಾಥವಿಟ್ಠಲ ವಿಶ್ವವ್ಯಾಪಕನೂ ॥ ೩೫ ॥

ಅಂತು ಸಂಧಿ ೬ಕ್ಕೆ ಪದ ೧೮೧ಕ್ಕೆ ಪಂಚಾಗ್ನಿಹೋತ್ರಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೭. ಪಂಚತನ್ಮಾತ್ರಸಂಧಿ.

## (ತನುಚತುಷ್ಟಯಸಂಧಿ)

ಸ್ವಕೀಯ ದೇಹದಲ್ಲಿರುವ ವಿವರಗಳನ್ನು ಜ್ಞಾನಚಕ್ಷುಸ್ಸಿನಿಂದ ತಿಳಿದು ಉಪಾಸನ ಮಾಡತಕ್ಕದೆಂದು ಅರ್ಥಾತ್ ಪೂರ್ವೋಕ್ತ ಸ್ಥೂಲದೇಹ ವಿಚಾರವನ್ನೇ ವಿಶದವಾಗಿ ಹೇಳುತ್ತಾರೆ



॥ ಶ್ರೀಹರಯೇ ನಮಃ ॥

ರಾಗ ಶಂಕರಾಭರಣ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಭೂಸಲಿಲಶಿಖಿಪವನಭೂತಾ- । ಕಾಶದೊಳಗೈದೈದು ತನ್ಮಾ- । ತ್ರಾಸಹಿತ ವೊಂದಧಿಕಪಂಚಾಶದ್ವರಣವೇದ್ಯಾ ॥ ಈ ಶರೀರದಿ ವ್ಯಾಪಿಸಿದ್ದು ಸು- । ರಾಸುರರಿಗೆ ನಿರಂತರದಲಿ ಸು- । ಖಾಸುಖಪ್ರದನಾಗಿ ಯಾಡುವ ದ್ವೇಷಿಪರ ಬಡಿವ ॥ ೧ ॥

ಪ್ರಣವಪ್ರತಿಪಾದ್ಯ ತ್ರಿನಾಮದಿ । ತನುವಿನೊಳು ತ್ರಿಸ್ಥಾನಗನಿರು- । ದ್ಧನು ತ್ರಿಪಂಚಕಯೇಕವಿಂಶತಿಚತುರವಿಂಶತಿಗ ॥ ಎನಿಸಿ ಯೆಪ್ಪತ್ತೆರಡು ಸಾವಿರ- । ವಿನಿತು ನಾಡಿಗಳೊಳು ನಿಯಾಮಿಸು- । ತಿನಗಭಸ್ತಿಗಲೋಕದೊಳು ಸರ್ವತ್ರ ಬೆಳಗುವನು ॥ ೨ ॥

ಜೀವಲಿಂಗನಿರುದ್ಧ ಸ್ಥೂಲಕ- । ಳೇವರಗಳಲಿ ವಿಶ್ವ ತುರಗ । ಗ್ರೀವ ಮೂಲೇಶಾಚ್ಯುತತ್ರಯ ಹಂಸಮೂರ್ತಿಗಳ ॥ ಈ ವಿಧ ಚತುಸ್ಥಾನದಲಿ ಶಾಂ- । ತೀವರನ ಈರೆರಡು ರೂಪದಿ । ಭಾವಿಸುವದೇಕೋನವಿಂಶತಿಮೂರ್ತಿ ಸರ್ವತ್ರ ॥ ೩ ॥

ಕಲುಷವಿಲ್ಲದ ದರ್ಪಣದಿ ಪ್ರತಿ- । ಫಲಿಸಿ ಸರ್ವ ಪದಾರ್ಥಗಳು
ಕಂ- । ಗೊಳಿಸುವಂದದಿ ಬಿಂಬ ಜಡಚೇತನಗಳೊಳಗಿದ್ದು ॥ ಪೊಳೆವ
ಬಹುರೂಪದಲಿ ಸಜ್ಜನ- । ರೊಳಗೆ ಮನದರ್ಪಣದಿ ತಾ ನಿ- । ಶ್ಚಲ
ನಿರಾಮಯ ನಿರ್ವಿಕಾರ ನಿರಾಶ್ರಯಾನಂತ ॥ ೪ ॥

ಈ ಶರೀರಚತುಷ್ಟಯಗಳೊಳು । ಕೋಶಧಾತುಗ ಭಾರತೀಶ
ಪ್ರಾ- । ಣೇಶನಿಪ್ಪತ್ತೊಂದು ಸಾವಿರದಾರುನೂರೆನಿಪ ॥ ಶ್ವಾಸ ರೂಪಕ
ಹಂಸ ಭಾಸ್ಕರ । ಭೇಶರೊಳಗಿದ್ದವರ ಕೈವಿಡಿ- । ದೀ ಸರೋಜ ಭವಾಂ
ಡದೊಳು ಸರ್ವತ್ರ ತುಂಬಿಹನು ॥ ೫ ॥

ಶಿರಗಳೈದೈದೆರಡು ಬಾಹುಗ- । ಳೆರಡು ಪಾದಗಳೊಂದು
ಮಧ್ಯೋ- । ದರದಿ ಶೋಭಿಪ ವಾಙ್ಮನೋಮಯನೆನಿಸಿ ನಿತ್ಯದಲಿ ॥
ಕರಣ ಧಾತುಗಳಲ್ಲಿ ಯೆಪ್ಪ- । ತ್ತೆರಡುಸಾವಿರ ನಾಡಿಗಳಲಿ- । ಪ್ಪರವಿ
ದೂರನು ಭಾರತಪ್ರತಿಪಾದ್ಯನೆಂದೆನಿಸೀ ॥ ೬ ॥

ಈರೆರಡು ದೇಹೋವಿರ್ಭೂತಗ- । ಳಾರಧಿಕದಶಯುಗ್ಮಿನುತ
ಲ- । ಕ್ಷ್ಮೀರಮಣ ವಿಷ್ಣ್ವಾಖ್ಯರೂಪದಿ ಚತುಃಷಷ್ಟಿಕಳಾ ॥ ಧಾರಕನು
ತಾನಾಗಿ ಬ್ರಹ್ಮ ಪು- । ರಾರಿಮುಖ್ಯರೊಳಿದ್ದು ಸತತ ವಿ- । ಹಾರಮಾಳ್ಪ
ಚತುಷ್ಪದಾಹ್ವಯದಿಂದ ಲೋಕದೊಳು ॥ ೭ ॥

ತೃಣಮೊದಲು ಬ್ರಹ್ಮಾಂತಜೀವರ । ತನುಚತುಷ್ಟಯಗಳಲಿ
ನಾರಾ- । ಯಣನ ಸಾವಿರವೈದು ನೂರಿಪ್ಪತ್ತು ಮೇಲಾರು ॥ ಗಣನೆ
ಮಾಳ್ಪುದು ಬುಧರು ರೂಪವ । ಘೃಣಿಸ್ಸೂರ್ಯಾದಿತ್ಯ ನಾಮಗ- ।
ಳನುದಿನದಿ ಜಪಿಸುವರಿಗೀವಾರೋಗ್ಯ ಸಂಪದವಾ ॥ ೮ ॥

ಐದುನೊರೆಪ್ಪತ್ತನಾಲಕು । ಆಧಿಭೌತಿಕದಲ್ಲಿ ತಿಳಿವದು । ಐದೆ
ರಡು ಶತವೇಕವಿಂಶತಿರೂಪವಧ್ಯಾತ್ಮಾ ॥ ಭೇದಗಳಲಿನ್ನೂರುಮುವ್ವ- ।
ತ್ತಾದ ಮೇಲೊಂದಧಿಕ ಮೂರ್ತಿಗ- । ಳಾದರದಲಧಿದೈವದೊಳು ಚಿಂತಿ
ಪುದು ಭೂಸುರರು ॥ ೯ ॥

ಸುರುಚಿಶಾರ್ವರಿಕರನೆನಿಸಿ ಸಂ- । ಕರುಷಣ ಪ್ರದ್ಯುಮ್ನ ಶಶಿಭಾ- । ಸ್ಕರರೊಳಗೆ ಅರವತ್ತಧಿಕಮೂನ್ನೂರು ರೂಪದಲಿ ॥ ಕರೆಸಿಕೊಂಬನು ಅಹಸ್ಸಂವ- । ತ್ಸರನೆನಿಪನು ವಿಶಿಷ್ಟನಾಮದ- । ಲರಿತವರಿಗಾರೋಗ್ಯ ಭಾಗ್ಯವನೀವ ಸಂದಮಯ ॥ ೧೦ ॥

ಏಕಪಂಚಾಶದ್ವರಣಗತ । ಮಾಕಳತ್ರನು ಸರ್ವರೊಳಗ- । ವ್ಯಾಕೃತಾಕಾಶಾಂತವ್ಯಾಪಿಸಿ ನಿಗಮತತಿಗಳನೂ ॥ ವ್ಯಾಕರಣ ಭಾರತಮುಖಾದ್ಯ- । ನೇಕಶಾಸ್ತ್ರಪುರಾಣಭಾಷ್ಯಾ- । ನೀಕಗಳ ಕಲ್ಪಿಸಿ ಮನೋವಾಙ್ಮಯನೆನಿಸಿಕೊಂಬ ॥ ೧೧ ॥

ಭಾರಭೃನ್ನಾಮಕನ ಸಾವಿರ- । ದಾರನೂರಿಪ್ಪತ್ತುನಾಲಕು । ಮೂರುತಿಗಳು ಚರಾಚರದಿ ಸರ್ವತ್ರ ತುಂಬಿಹವೂ ॥ ಆರುನಾಲಕು ಜಡಗಳಲಿ ಹದಿ- । ನಾರು ಚೇತನಗಳಲಿ ಚಿಂತಿಸೆ । ತೋರಿಕೊಂಬನು ತನ್ನರೂಪವ ಸಕಲ ರಾವಿನಲಿ ॥ ೧೨ ॥

ಮಿಸುಣಿಸೋಲಿಪ ಮಣಿಯವೋಲ್ ರಾ- । ಜಿಸುವ ಬ್ರಹ್ಮಾದಿಗಳ ಮನದಲಿ । ಬಿಸಜಜಾಂಡಾಧಾರಕನು ಆಧೇಯನೆಂದೆನಿಸಿ ॥ ದ್ವಿಶತ ನಾಲ್ವತ್ತೆರಡು ರೂಪದಿ । ಶಶಿಯೊಳಿಪ್ಪನು ಶಶದೊಳಗೆ ಶೋ- । ಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ ॥ ೧೩ ॥

ಎರಡುಸಾವಿರದೆಂಟುರೂಪವ- । ನರಿತು ಸರ್ವಪದಾರ್ಥದಲಿ ಶ್ರೀ- । ವರನ ಪೂಜೆಯ ಮಾಡು ವರಗಳ ಬೇಡು ಕೊಂಡಾಡು ॥ ಬರಿದೆ ಜಲದೊಳು ಮುಳುಗಿ ಬಿಸಿಲೊಳು । ಬೆರಳನೆಣಿಸಿದರೇನು ಸದ್ಗುರು । ಹಿರಿಯರನುಸರಿಸಿರದೆ ಮರ್ಮವನರಿಯದಿಹ ನರನು ॥ ೧೪ ॥

ಮತ್ತೆ ಚಿದ್ದೇಹದ ಒಳಗೆ ಯೆಂ- । ಭತ್ತುಸಾವಿರದೇಳನೂರಿ- । ಪ್ಪತ್ತರೈದು ನೃಸಿಂಹರೂಪದಲಿದ್ದು ಜೀವರಿಗೇ ॥ ನಿತ್ಯದಲಿ ಹಗಲಿರುಳು ಬಪ್ಪಪ- । ಮೃತ್ಯುವಿಗೆ ತಾ ಮೃತ್ಯುವೆನಿಸುವ । ಭೃತ್ಯವತ್ಸಲ ಭಯನಿವಾರಣ ಭಾಗ್ಯಸಂಪನ್ನ ॥ ೧೫ ॥

ಜ್ವರದೊಳಿಪ್ಪತ್ತೇಳು ಹರನೊಳ- । ಗಿರುವ ಇಪ್ಪತ್ತೆಂಟು ರೂಪದಿ । ಎರಡುಸಾವಿರದೆಂಟುನೂರಿಪ್ಪತ್ತರೇಳೆನಿಪ ॥ ಜ್ವರಹರಾಹ್ವಯ ನಾರಸಿಂಹನ । ಸ್ಮರಣೆಮಾತ್ರದಿ ದುರಿತರಾಶಿಗ- । ಳಿರದೆ ಪೋಪವು ತರಣಿಬಿಂಬವ ಕಂಡ ಹಿಮದಂತೆ ॥ ೧೬ ॥

ಮಾಸಪರಿಯಂತರವು ಬಿಡದೆ ನೃ- । ಕೇಸರಿಯ ಶುಭನಾಮ ಮಂತ್ರ ಜಿ- । ತಾಸನದಲೇಕಾಗ್ರಚಿತ್ತದಿ ನಿಷ್ಕಪಟದಿಂದಾ ॥ ಬೇಸರದೆ ಜಪಿಸಲು ವೃಜಿನಗಳ । ನಾಶಗೈಸಿ ಮನೋರಥಗಳ ಪ- । ರೇಶ ಪೂರ್ತಿಯ ಮಾಡಿ ಕೊಡುವನು ಕಡೆಗೆ ಪರಗತಿಯಾ ॥ ೧೭ ॥

ಚತುರಮೂರ್ತ್ಯಾತ್ಮಕ ಹರಿಯು ತ್ರಿಂ- । ಶತಿ ಸುರೂಪದಿ ಬ್ರಹ್ಮನೊಳು ಮಾ- । ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ ॥ ಸುತರೊಳಿಪ್ಪತ್ತೈದು ಹದಿನೆಂ- । ಟತುಳರೂಪಗಳರಿತು ವತ್ಸರ । ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವಾ ॥ ೧೮ ॥

ನೂರುವರುಷಕೆ ದಿವಸ ಮೂವ- । ತ್ತಾರುಸಾವಿರವಹವು ನಾಡಿಶ- । ರೀರದೊಳಗಿನಿತಿಹವು ಸ್ತ್ರೀಪುಂಭೇದದಲಿ ಹರಿಯೂ ॥ ಈರಧಿಕಯೊಪ್ಪತ್ತು ಸಾವಿರ । ಮೂರುತಿಗಳನೆ ನೆನೆದು ಸರ್ವಾ- । ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದೂ ॥ ೧೯ ॥

ಕಾಲಕರ್ಮಗುಣಸ್ವಭಾವಗ- । ಳಾಲಯನು ತಾನಾಗಿ ಲಕ್ಷ್ಮೀ । ಲೋಲ ತತ್ತದ್ರೂಪನಾಮದಿ ಕರೆಸುತೊಳಗಿದ್ದು ॥ ಲೀಲೆಯಿಂದಲಿ ಸರ್ವಜೀವರ । ಪಾಲಿಸುವ ಸಂಹರಿಸಿ ಸೃಷ್ಟಿಪ । ಮೂಲಕಾರಣ ಪ್ರಕೃತಿಗುಣಕಾರ್ಯಗಳ ಮನೆ ಮಾಡಿ ॥ ೨೦ ॥

ತಿಲಜವರ್ತಿಗಳನುಸರಿಸಿ ಪ್ರ- । ಜ್ವಲಿಸಿ ದೀಪಗಳಾಲಯದಕ- । ತ್ತಲೆಯ ಭಂಗಿಸಿ ತದ್ಗತಾರ್ಥವ ತೋರುವಂದದಲಿ ॥ ಜಲರುಹೇಕ್ಷಣ ತನ್ನವರ ಮನ- । ದೊಳಗೆ ಭಕ್ತಿಜ್ಞಾನಕರ್ಮಕೆ । ಪೊಲಿದು ಹೊಳೆವುತ ತೋರುವನು ಗುಣರೂಪಕ್ರಿಯೆಗಳನು ॥ ೨೧ ॥

ಆವ ದೇಹವ ಕೊಡಲಿ ಹರಿ ಮು- । ತ್ತಾವ ಲೋಕದೊಳಿಡಲಿ ತಾ ಮು- । ತ್ತಾವ ದೇಶದೊಳಿರಲಿ ಆವಾವಸ್ಥೆಗಳು ಬರಲಿ ॥ ಈವಿಧದಿ ಜಡ ಚೇತನದೊಳು ಪ- । ರಾವರೇಶನ ರೂಪಗುಣಗಳ । ಭಾವಿಸುತ ಸುಜ್ಞಾನಭಕುತಿಯ ಬೇಡು ಕೊಂಡಾಡೂ ॥ ೨೨ ॥

ಒಂದರೊಳಗೊಂದೊಂದು ಬೆರೆದಿಹ- । ವಿಂದಿರೇಶನ ರೂಪಗಳ ಮನ । ಬಂದ ತೆರದಲಿ ಚಿಂತಿಸಿದಕನುಮಾನವಿನಿತಿಲ್ಲಾ ॥ ಸಿಂಧುರಾಜ ನೊಳಂಬರಾಲಯ । ಬಂಧಿಸಲು ಪ್ರತಿತಂತುಗಳೊಳುದ- । ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದೀ ॥ ೨೩ ॥

ಒಂದುರೂಪದೊಳೊಂದವಯವದೊ- । ಳೊಂದುರೋಮದೊಳೊಂದು ದೇಶದಿ । ಪೊಂದಿಯಿಪ್ಪಬುಜಾಂಡನಂತಾನಂತಕೋಟಿಗಳು ॥ ಹಿಂದೆ ಮಾರ್ಕಂಡೇಯ ಕಾಣನೆ । ವೊಂದುರೂಪದಿ ಸೃಷ್ಟಿಪ್ರಳಯವ- । ನಿಂದಿರೇಶನೊಳೇನಿದಚ್ಚರಿಯಪ್ರಮೇಯ ಸದಾ ॥ ೨೪ ॥

ಒಂದನಂತಾನಂತರೂಪಗ- । ಳೊಂದೆ ರೂಪದೊಳಿಹವು ಲೋಕಗ- । ಳೊಂದೆ ರೂಪದಿ ಸೃಷ್ಟಿಸ್ಥಿತಿವೊದಲಾದ ವ್ಯಾಪಾರ ॥ ಒಂದೆ ಕಾಲದಿ ಮಾಡಿ ತಿಳಿಸದೆ । ಸಂದಣಿಸಿಕೊಂಡಿಪ್ಪ ಜಗದೊಳು । ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ ॥ ೨೫ ॥

ಶ್ರೀರಮೇಶನ ಮೂರ್ತಿಗಳು ನವ । ನಾರಿಕುಂಜರದಂತೆ ಯೇಕಾ- । ಕಾರ ತೋರ್ಪವು ಅವಯವಾಹ್ವಯ ಅವಯವಗಳಲ್ಲೀ ॥ ಬೇರೆಬೇರ್ಕಂಗೊಳಿಸುತಿರ್ಪ ಶ- । ರೀರದೊಳು ನಾನಾಪ್ರಕಾರ ವಿ- । ಕಾರಶೂನ್ಯ ವಿರಾಟನೆನಿಸುವ ಪದುಮಜಾಂಡದೊಳು ॥ ೨೬ ॥

ವಾರಿಜಭವಾಂಡದೊಳು ಲಕ್ಷ್ಮೀ । ನಾರಸಿಂಹನ ರೂಪಗುಣಗಳು । ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸುತಿಹವು ॥ ಕಾರಣಾಂಶಾವೇಶ ವ್ಯಾಪ್ತವ- । ತಾರಕಾರ್ಯವ್ಯಕ್ತಾವ್ಯಕ್ತವು । ಆರು ನಾಲ್ಕು ವಿಭೂತಿಯಂತರ್ಯಾಮಿ ರೂಪಗಳು ॥ ೨೭ ॥

ಮಣಿಗಳೊಳಗಿಹ ಸೂತ್ರದಂದದಿ । ಪ್ರಣವಪಾದ್ಯನು ಚೇತನಾ ಚೇ- । ತನಜಗತ್ತಿನೊಳನುದಿನದಲಾಡುವನು ಸುಖಪೂರ್ಣ ॥ ದಣಿವಿಕೆಯು ಇವಗಿಲ್ಲ ಬಹು ಕಾ- । ರುಣಿಕನಂತಾನಂತಜೀವರ । ಗಣದೊಳೀಕಾಂಶಾಂಶ ರೂಪದಿ ನಿಂತು ನೇಮಿಸುವ ॥ ೨೮ ॥

ಜೀವಜೀವರ ಭೇದ ಜಡಜಡ । ಜೀವಜಡ ಜಡಜೀವರಿಂದಲಿ । ಶ್ರೀವರನು ಅತ್ಯಂತ ಭಿನ್ನ ವಿಲಕ್ಷಣನು ಲಕ್ಷ್ಮೀ ॥ ಮೂವರಿಂದಲಿ ಪದುಮಜಾಂಡದಿ । ತಾ ವಿಲಕ್ಷಣಳೆನಿಸುತಿಪ್ಪಳು । ಸಾವಧಿಕ ಸಮಶೂನ್ಯಳೆಂದರಿತೀರ್ವರನು ಭಜಿಸು ॥ ೨೯ ॥

ಆದಿತೇಯರು ತಿಳಿಯದಿಹ ಗುಣ । ವೇದಮಾನಿಗಳೆಂದೆನಿಪ ವಾ- । ಣ್ಯಾದಿಗಳು ಬಲ್ಲರವರರಿಯದ ಗುಣಗಣಂಗಳನು ॥ ವೇಧ ಬಲ್ಲನು ಬೊಮ್ಮನರಿಯದ- । ಗಾಧಗುಣಗಳ ಲಕುಮಿ ಬಲ್ಲಳು । ಶ್ರೀಧರೊಬ್ಬನುಪಾಸ್ಯ ಸದ್ಗುಣಪೂರ್ಣ ಹರಿಯೆಂದೂ ॥ ೩೦ ॥

ಇಂತನಂತಾನಂತ ಗುಣಗಳ । ಪ್ರಾಂತಗಾಣದೆ ಮಹಲಕುಮಿ ಭಗ- । ವಂತಗಾಭರಣಾಯುಧಾಂಬರವಾಲಯಗಳಾಗಿ ॥ ಸ್ವಾಂತದಲಿ ನೆಲೆಗೊಳಿಸಿ ಪರಮ ಮು- । ರಂತಮಹಿಮನ ದೌತ್ಯಕರ್ಮ ನಿ- । ರಂತರದಿ ಮಾಡುತಲಿ ತದಧೀನತ್ವವೈದಿದಳೂ ॥ ೩೧ ॥

ಪ್ರಳಯಜಲಧಿಯೊಳುಳ್ಳ ನಾವೆಯು । ಹೊಲಬುಗಾಣದೆ ಸುತ್ತುವಂದದಿ । ಜಲರುಹೇಕ್ಷಣನಮಲಗುಣರೂಪಗಳ ಚಿಂತಿಸುತಾ ॥ ನೆಲಿಯುಗಾಣದೆ ಮಹಲಕುಮಿ ಚಂ- । ಚಲವನೈದಿಹಳಲ್ಪಜೀವರಿ- । ಗಳವಡುವವೇನಿವನ ಮಹಿಮೆಗಳೀಜಗತ್ರಯದೀ ॥ ೩೨ ॥

ಶ್ರೀನಿಕೇತನ ಸಾತ್ವತಾಂಪತಿ । ಜ್ಞಾನಗಮ್ಯ ಗಯಾಸುರಾರ್ದನ । ಮೌನಿಕುಲಸನ್ಮಾನ್ಯ ಮಾನದ ಮಾತುಲಧ್ವಂಸೀ ॥ ದೀನಜನಮಂದಾರ ಮಧುರಿಪು । ಪ್ರಾಣದ ಜಗನ್ನಾಥವಿಟ್ಠಲ । ತಾನೆ ಗತಿಯೆಂದನುದಿನವಿ ನಂಬಿದವರನು ಪೊರೆವಾ ॥ ೩೩ ॥

ಅಂತು ಸಂಧಿ ೭ಕ್ಕೆ ಪದ ೨೧೪ಕ್ಕೆ ಪಂಚತನ್ಮಾತ್ರಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

# ೮. ಮಾತೃಕಾಸಂಧಿ.

ಇದರಲ್ಲಿ ತಂತ್ರಸಾರೋಕ್ತವಾದ ಮಾತೃಕಾಮಂತ್ರಪ್ರಕಾರ ಸ್ವಕೀಯ ಅವಯವಗಳಲ್ಲಿ ಚಿಂತನೆ ಮಾಡುವ ವಿಧಾನವನ್ನೂ, ತತ್ತ್ವಾಭಿಮಾನಿದೇವತೆಗಳ ಮತ್ತು ಅಜಾದಿವರ್ಣವಾಚ್ಯ ಭಗವದ್ರೂಪಗಳ ವಿಚಾರವನ್ನೂ ಹೇಳುತ್ತಾರೆ.



॥ ವಾಸುದೇವಾಯ ನಮಃ ॥

ರಾಗ ಆರಭಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಪಾದಮಾನಿಜಯಂತನೊಳಗೆ ಸು- । ಮೇಧನಾಮಕನಿಪ್ಪ ದಕ್ಷಿಣ ।
ಪಾದದಂಗುಟದಲ್ಲಿ ಪವನನು ಭಾರಭೃದ್ರೂಪಾ ॥ ಕಾದುಕೊಂಡಿಹ
ಟಂಕಿತರ ಮೊದ- । ಲಾದ ನಾಮದಿ ಸಂಧಿಗಳಲೀ- । ರೈದು ರೂಪದ
ಲಿದ್ದು ಸಂತತ ನಡೆದು ನಡೆಸುತಲಿ ॥ ೧ ॥

ಕಪಿಲ ಚಾರ್ವಾಂಗಾದಿರೂಪದಿ । ವಪುಗಳೊಳು ಹಸ್ತಗಳ ಸಂಧಿ
ಯೊ- । ಳಪರಿಮಿತಕರ್ಮಗಳ ಮಾಡುತಲಿಪ್ಪ ದಿನದಿನದಿ ॥ ಕೃಪಣವತ್ಸಲ
ಪಾರ್ಶ್ವದೊಳು ಪರ । ಸುಫಲಿಯೆನಿಸುವ ಗುದ ಉಪಸ್ಥದಿ । ವಿಪುಳಬಲಿ
ಭಗ ಮನವೆನಿಸಿ ತುಂದಿಯೊಳಗಿರುತಿಹನೂ ॥ ೨ ॥

ಐದು ಮೇಲೊಂದಧಿಕ ದಳವು- । ಳ್ಳೈದು ಪದ್ಮವು ನಾಭಿಮೂ
ಲದಿ । ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ ॥ ಐದಿಸುತ
ಗರ್ಭವನು ಜೀವರ- । ನಾದಿಕರ್ಮ ಪ್ರಕೃತಿಗುಣಗಳ । ಹಾದಿ ತಪ್ಪಲು
ಗೊಡದೆ ವ್ಯಾಪಾರಗಳ ಮಾಡುತಿಹಾ ॥ ೩ ॥

ನಾಭಿಯಲಿ ಷಟ್ಕೋಣಮಂಡಲ- । ದೀ ಭವಿಷ್ಯಬ್ರಹ್ಮನೊಳು
ಮು- । ಕ್ತಾಭ ಶ್ರೀಪ್ರದ್ಯುಮ್ನನಿಪ್ಪನು ವಿಬುಧಗಣಸೇವ್ಯಾ ॥ ಶೋಭಿ
ಸುತ ಕೌಸ್ತುಭವೆ ಮೊದಲಾ- । ದಾಭರಣ ಆಯುಧಗಳಿಂದ ಮ- ।
ಹಾಭಯಂಕರ ಪಾಪಪುರುಷನ ಶೋಷಿಸುತ ನಿತ್ಯ ॥ ೪ ॥

ದ್ವಾದಶಾರ್ಕರ ಮಂಡಲವು ಮ- । ಧ್ಯೋದರದೊಳು ಸುಷುಮ್ನ
ದೊಳಗಿಹು- । ದೈದು ರೂಪಾತ್ಮಕನು ಅರವತ್ತಧಿಕ ಮುನ್ನೂರೂ ॥ ಈ
ದಿವಾರಾತ್ರಿಗಳ ಮಾನಿಗ- । ಳಾದ ದಿವಿಜರ ಸಂತಯಿಸುತ ನಿ- । ಷಾದ
ರೂಪಕ ದೈತ್ಯರನು ಸಂಹರಿಪ ನಿತ್ಯದಲಿ ॥ ೫ ॥

ಹೃದಯದೊಳಗಿಹುದಷ್ಟದಳಕಮ- । ಲದರೊಳಗೆ ಪ್ರಾದೇಶನಾ
ಮಕ- । ನುದಿತಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ ॥ ಪದುಮ
ಚಕ್ರಸುಶಂಖಸುಗದಾಂ- । ಗದಕಟಕಮುಕುಟಾಂಗುಳೀಯಕ । ಪದಕ
ಕೌಸ್ತುಭಹಾರಗ್ರೈವೇಯಾದಿಭೂಷಿತನೂ ॥ ೬ ॥

ದ್ವಿದಳಪದ್ಮವು ಶೋಭಿಪುದು ಕಂ- । ಠದಲಿ ಮುಖ್ಯಪ್ರಾಣ
ತನ್ನಯ । ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ॥
ಉದಕವನ್ನಾದಿಗಳಿಗವಕಾ- । ಶದನು ತಾನಾಗಿದ್ದುದಾನಾ- । ಭಿಧನು
ಶಬ್ದವ ನುಡಿದು ನುಡಿಸುವ ಸರ್ವಜೀವರೊಳೂ ॥ ೭ ॥

ನಾಸಿಕದಿ ನಾಸತ್ಯದಸ್ರರು । ಶ್ವಾಸಮಾನಿ ಪ್ರಾಣಭಾರತಿ । ಹಂಸ
ಧನ್ವಂತ್ರಿಗಳು ಅಲ್ಲಲ್ಲಿಪ್ಪರವರೊಳಗೆ ॥ ಭೇಶಭಾಸ್ಕರರಕ್ಷಿಯುಗಳಕ- ।
ಧೀಶರೆನಿಪರು ಅವರೊಳಗೆ ಲ- । ಕ್ಷ್ಮೀಶದಧಿವಾಮನರು ನಿಯಾಮಿ
ಸುತಲಿರುತಿಹರೂ ॥ ೮ ॥

ಸ್ತಂಭರೂಪದಲಿಪ್ಪ ದಕ್ಷಿಣ । ಅಂಬಕದಿ ಪ್ರದ್ಯುಮ್ನ ಗುಣರೂ- ।
ಪಾಂಭೃಣಿಯು ತಾನಾಗಿ ಯಿಪ್ಪಳು ವತ್ಸರೂಪದಲಿ । ಪೊಂಬಸಿರ ಪದ
ಯೋಗ್ಯಪವನ ತ್ರಿ- । ಯಂಬಕಾದಿಸಮಸ್ತದಿವಿಜಕ- । ದಂಬಸೇವಿತ
ನಾಗಿ ಸರ್ವಪದಾರ್ಥಗಳ ತೋರ್ಪ ॥ ೯ ॥

ನೇತ್ರಗಳಲಿ ವಸಿಷ್ಠ ವಿಶ್ವಾ- । ಮಿತ್ರ ಭಾರದ್ವಾಜ ಗೌತಮ- ।
ನತ್ರಿಯಾಜಮದಗ್ನಿನಾಮಗಳಿಂದ ಕರೆಸುತಲೀ ॥ ಪತ್ರತಾಪಕಶಕ್ರಸೂ
ರ್ಯರ್ಧ- । ರಿತ್ರಿಪರ್ಜನ್ಯಾದಿ ಸುರರು ಜ- । ಗತ್ರಯೇಶನ ಭಜಿಪರನುದಿನ
ಪರಮ ಭಕುತಿಯಲಿ ॥ ೧೦ ॥

ಜ್ಯೋತಿಯೊಳಗಿಪ್ಪನು ಕಪಿಲ ಪುರು- । ಹೂತಮುಖದಿಕ್ಪತಿ
ಗಳಿಂದ ಸ- । ಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ॥
ಶ್ವೇತವರ್ಣ ಚತುರ್ಭುಜನು ಸಂ- । ಪ್ರೀತಿಯಿಂದಲಿ ಸ್ಥೂಲವಿಷಯವ ।
ಚೇತನರಿಗುಂಡುಣಿಪ ಜಾಗ್ರತೆಯಿತ್ತು ನೃಗಜಾಸ್ಯ ॥ ೧೧ ॥

ನೆಲಸಿಹರು ದಿಗ್ದೇವತೆಗಳಿ- । ಕ್ಕೆಲದಿ ಕರ್ಣಂಗಳಲಿ ತೀರ್ಥಂ- ।
ಗಳಿಗೆ ಮಾನಿಗಳಾದ ಸುರನದಿಮುಖ್ಯನಿರ್ಜರರು ॥ ಬಲದ ಕಿವಿಯಲಿ
ಯಿರುತಿಹರು ಬಾಂ- । ಬೊಳೆಯಜನಕತ್ರಿವಿಕ್ರಮನು ನಿ- । ರ್ಮಲಿನ
ರನು ಮಾಡುವನು ಈಪರಿ ಚಿಂತಿಸುವ ಜನರಾ ॥ ೧೨ ॥

ಚಿತ್ತಜೇಂದ್ರರು ಮನದೊಳಿಪ್ಪರು । ಕೃತ್ತಿವಾಸನಹಂಕೃತಿಯೊ
ಳಗೆ । ಚಿತ್ತಚೇತನಮಾನಿಗಳು ವಿಹಗೇಂದ್ರಫಣಿಪರೊಳು ॥ ನಿತ್ಯದಲಿ
ನೆಲೆಗೊಂಡು ಹತ್ತೊಂ- । ಭತ್ತುಮೊಗ ತೈಜಸನು ಸ್ವಪ್ನಾ- । ವಸ್ಥೆಯೈ
ದಿಸಿ ಜೀವರನ ಪ್ರವಿವಿಕ್ತಭುಕುವೆನಿಪಾ ॥ ೧೩ ॥

ಜ್ಞಾನಮಯ ತೈಜಸನು ಹೃದಯ । ಸ್ಥಾನವೈದಿಸಿ ಪ್ರಾಜ್ಞನೆಂ
ಬಭಿ- । ಧಾನದಿಂ ಕರೆಸುತ್ತ ಚಿತ್ಸುಖವ್ಯಕ್ತಿಯನೆ ಕೊಡುತಾ ॥ ಆನತೇ
ಷ್ಟಪ್ರದನು ಅನುಸಂ- । ಧಾನವೀಯದೆ ಸುಷ್ಟಿಯೈದಿಸಿ । ತಾನೆ ಪುನರಪಿ
ಸ್ವಪ್ನಜಾಗ್ರತೆಯೀವ ಚೇತನಕೆ ॥ ೧೪ ॥

ನಾಲಿಗೆಯೊಳಿಹ ವರುಣ ಮತ್ಸ್ಯಣು- । ನಾಲಿಗೆಯೊಳು ಉಪೇಂ
ದ್ರಇಂದ್ರರು । ತಾಲುಪರ್ಜನ್ಯಾಖ್ಯಸೂರ್ಯನು ಅರ್ಧಗರ್ಭನಿಹಾ ॥
ಆಲಿಯೊಳು ವಾಮನ ಸುಭಾಮನ । ಫಾಲದೊಳು ಶಿವಕೇಶವನು
ಸುಕ- । ಪೋಲದೊಳಗೆ ರತೀಶ ಕಾಮನು ಅಲ್ಲಿ ಪ್ರದ್ಯುಮ್ನ ॥ ೧೫ ॥

ರೋಮಗಳಲಿ ವಸಂತ ತ್ರಿಕಕು- । ಬ್ಧಾಮ ಮುಖದೊಳಗಗ್ನಿಭಾರ್ಗವ । ತಾಮರಸಭವ ವಾಸುದೇವರು ಮಸ್ತಕದೊಳಿಹರೂ ॥ ಈ ಮನದೊಳಿಹ ವಿಷ್ಣು ಶಿಖದೊಳು- । ವೂಮಹೇಶ್ವರನಾರಸಿಂಹ । ಸ್ವಾಮಿ ತನ್ನನುದಿನದಿ ನೆನೆವರ ಮೃತ್ಯು ಪರಿಹರಿಪಾ ॥ ೧೬ ॥

ಮೌಳಿಯಲ್ಲಿಹ ವಾಸುದೇವನು । ಏಳಧಿಕ ನವ ಜಾತಿರೂಪವ । ತಾಳಿ ಮುಖದೊಳು ನಯನಶ್ರವಣಾದ್ಯವಯವಗಳೊಳಗೇ ॥ ಆಳರಸು ತಾನಾಗಿ ಸತತ ಸು- । ಲೀಲೆ ಗೈವುತಲಿಪ್ಪ ಸುಖಮಯ । ಕೇಳಿ ಕೇಳಿಸಿ ನೋಡಿ ನೋಡಿಸಿ ನುಡಿದು ನುಡಿಸುಪನೂ ॥ ೧೭ ॥

ಎರಡಧಿಕ ಯೆಪ್ಪತ್ತೆನಿಪ ಸಾ- । ವಿರದ ನಾಡಿಗೆ ಮುಖ್ಯವೇಕೋ- । ತ್ತರಶತಗಳಲ್ಲಿಹವು ನೂರಾವೊಂದು ಮೂರ್ತಿಗಳೂ ॥ ಅರಿತು ದೇಹದಿ ಕಲಶನಾಮಕ । ಹರಿಗೆ ಕಳೆಗಳಿವೆಂದು ನೈರಂ- । ತರದಿ ಪೂಜಿಸುತಿಹರು ಪರಮಾದರದಿ ಭೂಸುರರೂ ॥ ೧೮ ॥

ಇದಕೆ ಕಾರಣವೆನಿಸುವವು ಯೆರ- । ಡಧಿಕದಶನಾಡಿಗಳೊಳಗೆ ಸುರ- । ನದಿಯೆ ಮೊದಲಾದಮಲತೀರ್ಥಗಳಿಹವು ಕರಣದಲೀ ॥ ಪದುಮನಾಭನು ಕೇಶವಾದಿ । ದ್ವಿದಶರೂಪದಲಿಪ್ಪನಲ್ಲತಿ । ಮೃದುಳವಾದ ಸುಷುಮ್ನದೊಳಗೇಕಾತ್ಮನೆನಿಸುವನು ॥ ೧೯ ॥

ಆಮ್ನಯಪ್ರತಿಪಾದ್ಯ ಶ್ರೀಪ್ರ- । ದ್ಯುಮ್ನ ದೇವನು ದೇಹದೊಳಗೆ ಸು- । ಷುಮ್ನದೀಡಾಪಿಂಗಳದಿ ವಿಶ್ವಾದಿ ರೂಪದಲಿ ॥ ನಿರ್ಮಲಾತ್ಮನು ವಾಣಿವಾಯು ಚ- । ತುರ್ಮುಖರೊಳಿದ್ದಖಿಳಜೀವರ । ಕರ್ಮಗುಣವನುಸರಿಸಿ ನಡೆವನು ವಿಶ್ವವ್ಯಾಪಕನು ॥ ೨೦ ॥

ಅಬ್ದಯನ ಋತುಮಾಸಪಕ್ಷ ಸು- । ಶಬ್ದದಿಂದಲಿ ಕರೆಸುತಲಿ ನೀ- । ಲಾಬ್ದವರ್ಣನಿರುದ್ಧ ಮೊದಲಾದ್ಯೈದು ರೂಪದಲಿ ॥ ಹಬ್ಬಿಹನು ಸರ್ವತ್ರದಲಿ ಕರು- । ಣಾಬ್ಧಿ ನಾಲ್ವತ್ತೈದು ರೂಪದಿ । ಲಭ್ಯನಾಗುವನೀ ಪರಿಯ ಧೇನಿಸುವ ಭಕತರಿಗೆ ॥ ೨೧ ॥

ಐದು ರೂಪಾತ್ಮಕನು ಇಪ್ಪ- । ತ್ತೈದು ರೂಪದಲಿಪ್ಪ ಮತ್ತದಿ- । ನೈದು ತಿಥಿಯಿಪ್ಪತ್ತನಾಲಕರಿಂದ ಪೆಚ್ಚಿಸಲು ॥ ಐದುವದು ಮುನ್ನೂರ ರರವ- । ತ್ತಾದ ದಿವಸಾಹ್ವಯನೊಳಗೆ ಮನ । ತೋಯ್ದವಗೆ ತಾಪತ್ರ ಯದ ಮಹದೋಷವೆಲ್ಲಿಹವೂ ॥ ೨೨ ॥

ದಿವಸಯಾಮಮುಹೂರ್ತಘಟಿಕಾ- । ದ್ಯವಯವಗಳೊಳಗಿದ್ದು ಗಂಗಾ । ಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿಪ್ಪಾ ॥ ಇವನ ಗುಣರೂಪಕ್ರಿಯಂಗಳ- । ನಿವಹದೊಳು ಮುಳುಗಾಡುತಲಿ ಭಾ- । ರ್ಗವಿ ಸದಾನಂದಾತ್ಮಳಾಗಿಹಳೆಲ್ಲ ಕಾಲದಲಿ ॥ ೨೩ ॥

ವೇದತತಿಗಳ ಮಾನಿ ಲಕ್ಷ್ಮಿ ಧ- । ರಾಧರನ ಗುಣರೂಪಕ್ರಿಯ ಗಳ- । ನಾದಿಮಧ್ಯಾಂತವನು ಕಾಣದೆ ಮನದಿ ಯೋಚಿಸುತ ॥ ಆದಪೆನೆ ಈತನಿಗೆ ಪತ್ನಿ ಕೃ- । ಪೋದಧಿಯು ಸ್ವೀಕರಿಸಿದನು ಲೋ- । ಕಾಧಿಪನು ಭಿಕ್ಷುಕನ ಮನೆಯಾತನವ ಕೊಂಬಂತೆ ॥ ೨೪ ॥

ಕೋವಿದರು ಚಿಂತಿಸುವದು ಶ್ರೀ- । ದೇವಿಯೊಳಗಿಹ ನಿಖಿಳಗುಣ ತೃಣ । ಜೀವರಲಿ ಕಲ್ಪಿಸಿ ಯುಕುತಿಯಲಿ ವಸ್ತು ಕ್ರಮದಿಂದ ॥ ದೇವ ದೇವಕಿಯಿಪ್ಪಳೆಂದರಿ- । ದಾ ವಿರಿಂಚನ ಜನನಿ ಈತನ । ಆವಕಾಲಕು ಅರಿಯಳಂತವ ನರರ ಪಾಡೇನು ॥ ೨೫ ॥

ಕ್ಷೀರದಧಿನವನೀತಘೃತದೊಳು । ಸೌರಭರಸಾಹ್ವಯನೆನಿಸಿ ಶಾಂ- । ತೀರಮಣಜ್ಞಾನ ಕ್ರಿಯೇಚ್ಛಾಶಕ್ತಿಯೆಂದೆಂಬಾ ॥ ಈರೆರಡು ನಾಮದಲಿ ಕರೆಸುವ । ಭಾರತೀ ವಾಗ್ದೇವಿವಾಯು ಸ- । ರೋರುಹಾಸ ನದಲ್ಲಿ ನೆಲಸಿಹರೆಲ್ಲ ಕಾಲದಲೀ ॥ ೨೬ ॥

ವಸುಗಳೆಂಟು ನವಪ್ರಜೇಶರು । ಶ್ವಸನಗಣವೈವತ್ತು ಯೇಕಾ- । ದಶ ದಿವಾಕರರನಿತು ರುದ್ರರು ಅಶ್ವಿನಿಗಳೆರಡೂ ॥ ದಶವಿಹೀನ ಶತಾಖ್ಯ ಈ ಸುಮ- । ನಸರೊಳಗೆ ಚತುರಾತ್ಮ ನೀಯಾ- । ಮಿಸುವ ಬ್ರಹ್ಮಸ ಮಾರ ಖಗಪ ಪಣೀಂದ್ರರೊಳಗಿದ್ದೂ ॥ ೨೭ ॥

ತೋರುತಿಪ್ಪನು ಚಕ್ರದಲಿ ಹಿಂ- । ಕಾರನಾಮಕ ಶಂಖದಲಿ ಪ್ರತಿ- । ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ ॥ ಕಾರುಣಿಕನು ದ್ಗೀಥನಾಮದಿ । ಮಾರರಮಣನ್ಯೆರೂಪಗಳ ಶಂ- । ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥ ೨೮ ॥

ತನುವೆ ರಥ ವಾಗಾಭಿಮಾನಿಯೆ । ಗುಣವೆನಿಸುವಳು ಶ್ರೋತ್ರದೊಳು ರೋ- । ಹಿಣಿ ಶಶಾಂಕರು ಪಾಶಪಾಣಿಗಳಶ್ವವೆಂದೆನಿಸೀ ॥ ಇನನು ಸಂಜ್ಞಾದೇವಿಯರು ಇಹ- । ರನಳಲೋಚನ ಸುತನೆನಿಸುವ । ಪ್ರಣವಪಾದ್ಯ ಪ್ರಾಣನಾಮಕ ರಥಿಕನೆನಿಸುವನೂ ॥ ೨೯ ॥

ಅಮಿತಮಹಿಮನಪಾರಗುಣಗಳ । ಸಮಿತವರ್ಣಾತ್ಮಕಶ್ರುತಿಸ್ಮೃತಿ । ಗಮಿಸಲಾಪವೆ ತದಭಿಮಾನಿಗಳೆಂದೆನಿಸಿಕೊಂಬ ॥ ಕಮಲಸಂಭವ ಭವಸುರೇಂದ್ರಾ- । ದ್ಯಮರರನುದಿನ ತಿಳಿಯಲರಿಯರು । ಸ್ವಮಹಿಮೆಗಳಾದ್ಯಂತಮಧ್ಯಗಳರಿವ ಸರ್ವಜ್ಞಾ ॥ ೩೦ ॥

ವಿತ್ತದೇಹಾಗಾರದಾರಾ- । ಪತ್ಯಮಿತ್ರಾದಿಗಳೊಳಗೆ ಹರಿ । ಪ್ರತ್ಯಗಾತ್ಮನು ಯೆಂದೆನಿಸಿ ನೆಲೆಸಿಪ್ಪನೆಂಪರಿದೂ ॥ ನಿತ್ಯದಲಿ ಸಂತೃಪ್ತಿ ಬಡಿಸುತ । ಉತ್ತಮಾಧಮ ಮಧ್ಯಮರ ಕೃತ । ಕೃತ್ಯನಾಗುನ್ಮತ್ತನಾಗದೆ ಭೃತ್ಯನಾನೆಂದೂ ॥ ೩೧ ॥

ದೇವ ದೇವೇಶನ ಸುಮೂರ್ತಿ ಕ- । ಳೇವರಗಳೊಳಗನವರತ ಸಂ । ಭಾವಿಸತ ಪೂಜಿಸುತ ನೋಡುತ ಸುಖಿಸುತಿರು ಬಿಡದೇ ॥ ಶ್ರೀವರಜಗನ್ನಾಥ ವಿಠಲನು । ತಾವೊಲಿದು ಕಾರುಣ್ಯದಲಿ ಭವ । ನೋವ ಪರಿಹರಿಸುವನು ಪ್ರವಿತತ ಪತಿತಪಾವನನು ॥ ೩೨ ॥

ಅಂತು ಸಂಧಿ ೮ಕ್ಕೆ ಪದ ೨೪೬ಕ್ಕೆ ಮಾತೃಕಾಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೯. ವರ್ಣಪ್ರಕ್ರಿಯಾಸಂಧಿ.

## (ಉದಾತ್ತಾನುದಾತ್ತಸಂಧಿ.)

ಇದರಲ್ಲಿ ೫೧ ವರ್ಣಗಳಿಗೆ ವ್ಯಂಜಕಗಳಾದ ಉದಾತ್ತಾನುದಾತ್ತಾದಿ ವೇದಸ್ವರಗಳ ವಿಚಾರ, ಜೀವವಿಚಾರ, ಜೈವೀಯ ಸ್ವರೂಪ ದೇಹದಲ್ಲಿ ಮಾತರಿಶ್ವದೇವರ ಪ್ರವೇಶ ಮೊದಲಾದ ವಿಚಾರಗಳನ್ನು ಹೇಳುತ್ತಾರೆ.

---

॥ ಶ್ರೀಹಯಗ್ರೀವಾಯ ನಮಃ ॥

ರಾಗ ಕಾನಡ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಹರಿಯ ಪಂಚಾಶದ್ವರ್ಣಸು- । ಸ್ವರವುದಾತ್ತನುದಾತ್ತಪ್ರಚಯ । ಸ್ವರಿತಸಂಧಿವಿಸರ್ಗಬಿಂದುಗಳೊಳಗೆ ತದ್ವಾಚ್ಯಾ ॥ ಇರುವ ತತ್ತನ್ನಾಮ ರೂಪಗ- । ಳರಿತುಪಾಸನಗೈವರಿಳೆಯೊಳು । ಸುರರೆ ಸರಿ ನರರಲ್ಲವವ ರಾಡುವದೆ ವೇದಾರ್ಥ ॥ ೧ ॥

ಈಶನಲಿ ವಿಜ್ಞಾನ ಭಗವ- । ದ್ದಾಸರಲಿ ಸದ್ಭಕ್ತಿ ವಿಷಯ ನಿ- । ರಾಶೆ ಮಿಥ್ಯಾವಾದವಲಿ ಪ್ರದ್ವೇಷ ನಿತ್ಯದಲೀ ॥ ಈ ಸಮಸ್ತ ಪ್ರಾಣಿಗಳಲಿ ರ- । ಮೇಶನಿಹನೆಂದರಿದು ಅವರಭಿ- । ಲಾಷೆಗಳ ಪೂರೈಸುವದೆ ಮಹ ಯಜ್ಞ ಹರಿಪೂಜೇ ॥ ೨ ॥

ತ್ರಿದಶ ಯೋಕಾತ್ಮಕನೆನಿಸಿ ಭೂ । ಉದಕಶಿಖಿಯೊಳು ಹತ್ತುಕರ ಣದಿ । ಅಧಿಪರೆನಿಸುವ ಪ್ರಾಣಮುಖ್ಯಾದಿತ್ಯರೊಳು ನೆಲಸಿ ॥ ವಿದಿತನಾ ಗಿದ್ದನವರತ ನಿರ- । ವಧಿಕ ಮಹಿಮನು ಸಕಲ ವಿಷಯವ । ನಿಧನನಾ ಮಕ ಸಂಕರುಷಣಾಹ್ವಯನು ಸ್ವೀಕರಿಪಾ ॥ ೩ ॥

ದಹಿಕ ದೈಶಿಕ ಕಾಲಿಕತ್ರಯ । ಗಹನಕರ್ಮಗಳುಂಟು ಇದ ರೊಳು । ವಿಹಿತಕರ್ಮಗಳರಿತು ನಿಷ್ಕಾಮುಕನು ನೀನಾಗೀ ॥ ಬೃಹತಿನಾಮಕ ಭಾರತೀಶನ । ಮಹಿತರೂಪವ ನೆನದು ಮನದಲಿ । ಅಹರಹರ್ಭಗವಂತಗರ್ಪಿಸು ಪರಮ ಭಕುತಿಯಲಿ ॥ ೪ ॥

ಮೂರುವಿಧಕರ್ಮಗಳೊಳಗೆ ಕಂ- । ಸಾರಿ ಭಾರ್ಗವ ಹಯವದನ ಸಂ- । ಪ್ರೇರಕನು ತಾನಾಗಿ ನವರೂಪಂಗಳನೆ ಧರಿಸಿ ॥ ಸೂರಿ ಮಾನವ ದಾನವರೊಳು ವಿ- । ಕಾರಶೂನ್ಯನು ಮಾಡಿ ಮಾಡಿಸಿ । ಸಾರಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ॥ ೫ ॥

ಅನಲ ಪಕ್ವವಗೈಸಿದನ್ನವ- । ನನಲನೊಳು ಹೋಮಿಸುವ ತೆರದಂ- । ತನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳಾ ॥ ಮನವಚನಕಾಯದಲಿ ತಿಳಿದನು- । ದಿನದಿ ಕೊಡು ಶಂಕಿಸದೆ ವೃಜಿನಾ- । ರ್ದನ ಸದಾ ಕೈಕೊಂಡು ಸಂತೈಸುವನು ತನ್ನವರ ॥ ೬ ॥

ಕುದುರೆಬಾಲದ ಕೊನೆಯ ಕೂದಲ । ತುದಿ ವಿಭಾಗವ ಮಾಡಿ ಶತವಿಧ- । ವದರೊಳೊಂದನು ನೂರು ಭಾಗವ ಮಾಡಲೆಂತಿಹುದೋ ॥ ವಿಧಿಭವಾದಿ ಸಮಸ್ತ ದಿವಿಜರ । ಮೊದಲುಮಾಡಿ ತೃಣಾಂತಜೀವರೊ- । ಳಧಿಕ ನ್ಯೂನತೆಯಿಲ್ಲವೆಂದಿಗು ಜೀವಪರಮಾಣೂ ॥ ೭ ॥

ಜೀವನಂಗುಷ್ಠಾಗ್ರಮೂರುತಿ । ಜೀವನಂಗುಟಮಾತ್ರಮೂರುತಿ । ಜೀವನಪ್ರಾದೇಶ ಜೀವಾಕಾರಮೂರ್ತಿಗಳೂ ॥ ಏವಮಾದಿಯನಂತರೂಪದಿ । ಯಾವದವಯವಗಳೊಳು ವ್ಯಾಪಿಸಿ । ಕಾವ ಕರುಣಾಳುಗಳ ದೇವನು ಈ ಜಗತ್ರಯವ ॥ ೮ ॥

ಬಿಂಬಜೀವಾಂಗುಷ್ಠಮಾತ್ರದಿ । ಯಿಂಬುಗೊಂಡಿಹ ಸರ್ವರೊಳು ಸೂ- । ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ ॥ ಎಂಬರೀತಗೆ ಕೋವಿದರು ವಿ- । ಶ್ವಂಭರಾತ್ಮಕ ಪ್ರಾಜ್ಞ ಭಕ್ತ ಕು- । ಟುಂಬಿ ಸಂತೈಸುವನು ಈಪರಿ ಬಲ್ಲ ಭಜಕರನು ॥ ೯ ॥

ಪುರುಷನಾಮಕ ಸರ್ವಜೀವರೊ- । ಳಿರುವ ದೇಹಾಕಾರರೂಪದಿ । ಕರಣನೀಯಾಮಕ ಹೃಷೀಕಪನಿಂದ್ರಿಯಂಗಳಲಿ ॥ ತುರಿಯನಾಮಕ ವಿಶ್ವ ತಾ ಹ- । ನ್ನೆರಡು ಬೆರಳುಳಿದುತ್ತಮಾಂಗದಿ । ಯೆರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ ॥ ೧೦ ॥

ವ್ಯಾಪಕನು ತಾನಾಗಿ ಜೀವಸ್ವ- । ರೂಪದೇಹದ ಒಳಹೊರಗೆ ನಿ- । ರ್ಲೇಪನಾಗಿಹ ಜೀವಕೃತಕರ್ಮಗಳನಾಚರಿಸೀ ॥ ಶ್ರೀಪಯೋಜ ಭವೇರರಿಂದ ಪ್ರ- । ದೀಪವರ್ಣ ಸುಮೂರ್ತಿ ಮಧ್ಯಗ । ತಾ ಪೊಳೆವ ವಿಶ್ವಾದಿರೂಪದಿ ಸೇವೆ ಕೈಕೊಳುತ ॥ ೧೧ ॥

ಗರುಡಶೇಷಭವಾದಿನಾಮವ । ಧರಿಸಿ ಪವನಸ್ವರೂಪದೇಹದಿ । ಕರಣಸೀಯಾಮಕನು ತಾನಾಗಿಪ್ಪ ಹರಿಯಂತೆ ॥ ಸರಸಿಜಾಸನವಾಣಿ ಭಾರತಿ । ಭರತಸಿಂದೊಡಗೂಡಿ ಲಿಂಗದಿ । ಇರುತಿಹರು ವಿಶ್ವಾದಿತೇಯರಿಗಿಲ್ಲವಾಸ್ಥಾನ ॥ ೧೨ ॥

ಜೀವನಕೆ ತುಷದಂತೆ ಲಿಂಗವು । ಸಾವಕಾಶದಿ ಪೊಂದಿ ಸುತ್ತಲು । ಪ್ರಾವರಣರೂಪದಲಿ ಇಪ್ಪದು ಭಗವದಿಚ್ಛೆಯಲೀ ॥ ಕೇವಲ ಜಡಪ್ರಕೃತಿ ಯಿದಕಧಿ- । ದೇವತೆಯು ಮಹಲಕುಮಿಯೆನಿಪಳು । ಆ ವಿರಜೆಯ ಸ್ನಾನಪರಿಯಂತರದಿ ಹತ್ತಿಹದು ॥ ೧೩ ॥

ಆರಧಿಕದಶ ಕಳೆಗಳುಳ್ಳ ಶ- । ರೀರವನಿರುದ್ಧಗಳ ಮಧ್ಯದಿ । ಸೇರಿ ಇಪ್ಪವು ಜೀವಪರಮಾಚ್ಛಾದಿಕದ್ವಯವು ॥ ಬಾರದಂದದಿ ದಾನವ ರನತಿ । ದೂರಗೈಸುತ ಶ್ರೀಜನಾರ್ದನ । ಮೂರುಗುಣದೊಳಗಿಪ್ಪನೆಂದಿಗು ತ್ರಿವೃತುವೆಂದೆನಿಸಿ ॥ ೧೪ ॥

ರುದ್ರಮೊದಲಾದಮರರಿಗೆ ಅನಿ- । ರುದ್ಧದೇಹವೆ ಮನೆ ಯೆನಿಸುವದು । ಇದ್ದು ಕೆಲಸವ ಮಾಡರಲ್ಲಿಂದಿತ್ತ ಸ್ಥೂಲದಲೀ ॥ ಕ್ರುದ್ಧಖಳ ದಿವಿಜರು ಪರಸ್ಪರ । ಸ್ಪರ್ಧೆಯಿಂದಲಿ ದ್ವಂದ್ವಕರ್ಮ ಸ- । ಮೃದ್ಧಿಗಳ ನಾಚರಿಸುವರು ಪ್ರಾಣೇಶನಾಜ್ಞೆಯಲಿ ॥ ೧೫ ॥

ಮಹಿಯೊಳಗೆ ಸುಕ್ಷೇತ್ರತೀರ್ಥದಿ । ತುಹಿನ ವರುಷ ವಸಂತಕಾಲದಿ । ವಹಿಕ ದೈಶಿಕ ಕಾಲಿಕತ್ರಯ ಧರ್ಮಕರ್ಮಗಳಾ ॥ ದ್ರುಹಿಣ ಮೊದಲಾದಮರರೆಲ್ಲರು । ವಹಿಸಿ ಗುಣಗಳನನುಸರಿಸಿ ಸ- । ನ್ನಿಹಿತರಾಗಿದ್ದೆಲ್ಲರೊಳು ಮಾಡುವರು ವ್ಯಾಪಾರಾ ॥ ೧೬ ॥

ಕೇಶ ಸಾಸಿರ ವಿಧ ವಿಭಾಗವ । ಗೈಸಲೆನಿತನಿತಿಹ ಸುಷುಮ್ನವು । ಆ ಶಿರಾಂತದಿ ವ್ಯಾಪಿಸಿಹುದೀದೇಹಮಧ್ಯದಲಿ ॥ ಆ ಸುಷುಮ್ನಕೆ ವಜ್ರಕಾರ್ಯ ಪ್ರ- । ಕಾಶಿನೀ ವೈದ್ಯುತಿಗಳಿಹವು ಪ್ರ- । ದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ ॥ ೧೭ ॥

ಆ ನಳಿನಭವ ನಾಡಿಯೊಳಗೆ ತ್ರಿ- । ಕೋಣಚಕ್ರವು ಇಪ್ಪುದಲ್ಲಿ ಕೃ- । ಶಾನು ಮಂಡಲ ಮಧ್ಯಗನು ಸಂಕರುಷಣಾಹ್ವಯನು ॥ ಹೀನ ಪಾಪಾತ್ಮಕನ ಪುರುಷನ । ಹಾನಿ ಗೈಸುತ ದಿನದಿನದಿ ವಿ- । ಜ್ಞಾನಮಯ ಶ್ರೀವಾಸುದೇವನು ಐದಿಸುವ ಕರುಣಿ ॥ ೧೮ ॥

ಮಧ್ಯನಾಡಿಯ ಮಧ್ಯದಲಿ ಹೃ- । ತ್ಪದ್ಮಮೂಲದಿ ಮೂಲಪತಿ ಪದ । ಪದ್ಮಮೂಲವಲಿಪ್ಪ ಪವನನ ಪಾದಮೂಲದಲಿ ॥ ಪೊದ್ದಿಕೊಂಡಿಹ ಜೀವಲಿಂಗನಿ- । ರುದ್ಧ ದೇಹವಿಶಿಷ್ಟನಾಗಿ ಕ- । ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ॥ ೧೯ ॥

ನಾಳ ಮಧ್ಯದಲಿಪ್ಪ ಹೃತ್ಕೀ- । ಲಾಲಜದೊಳಿಪ್ಪಷ್ಟದಳದಿ ಕು- । ಲಾಲಚಕ್ರದ ತೆರದಿ ಚರಿಸುತ ಹಂಸನಾಮಕನೂ ॥ ಕಾಲಕಾಲಗಳಲ್ಲಿ ಎಚ್ಚರಿಸಿ । ಪಾಲಕರ ಕೈಸೇವೆಗೊಳುತ ಕೃ- । ಪಾಳು ಅವರಭಿಲಾಷೆಗಳ ಪೂರೈಸಿ ಕೊಡುತಿಪ್ಪಾ ॥ ೨೦ ॥

ವಾಸವಾನುಜ ರೇಣುಕಾತ್ಮಜ । ದಾಶರಥಿ ವೃಜಿನಾರ್ದನಮಲ ಜ- । ಲಾಶಯಾಲಯ ಹಯವದನ ಶ್ರೀಕಪಿಲ ನರಸಿಂಹ ॥ ಈಸು ರೂಪದೊಳವರವರ ಸಂ- । ತೋಷಬಡಿಸುತ ನಿತ್ಯಸುಖಮಯ । ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸೀ ॥ ೨೧ ॥

ಸುರಪನಾಲಯಕೈದಿದಡೆ ಮನ- । ವೆರಗುವದು ಸತ್ಪುಣ್ಯಮಾರ್ಗದಿ । ಬರಲು ವಹ್ನಿಯ ಮನೆಗೆ ನಿದ್ರಾಲಸ್ಯ ಹಸಿತೃಷೆಯು ॥ ತರಣಿತನಯನಿಕೇತನದಿ ಸಂ- । ಭ್ರಂತ ಕೋಪಾಟೋಪ ತೋರುವ । ಪರವಿದೂರನು ನಿಋಋತಿಯೊಳಿರೆ ಪಾಪಗಳ ಮಾಳ್ಪಾ ॥ ೨೨ ॥

ವರುಣನಲ್ಲಿ ವಿನೋದಹಾಸ್ಯವು । ಮರುತನೊಳು ಗಮನಾಗಮನ ಹಿಮ- । ಕರದನಾಧಿಪನಲ್ಲಿ ಧರ್ಮದ ಬುದ್ಧಿ ಜನಿಸುವಗೂ ॥ ಹರನ ಮಂದಿರದಲ್ಲಿ ಗೋ ಧನ । ಧರಣಿ ಕನ್ಯಾದಾನಗಳು ಒಂ- । ದರೆಘಳಿಗೆ ತಡೆಯದಲೆ ಕೊಡುತಿಹ ಚಿತ್ತಪುಟ್ಟಿಪದು ॥ ೨೩ ॥

ಹೃದಯದೊಳಗೆ ವಿರಕ್ತಿ ಕೇಸರ- । ಕೊದಗೆ ಸ್ವಪ್ನ ಸುಷುಪ್ತಿಲಿಂಗದಿ । ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆಯು ಪುಟ್ಟುವದು ॥ ಸುದರುಶನ ಮೊದಲಾದ ಅಷ್ಟಾ- । ಯುಧವ ಪಿಡಿದು ದಿಶಾಧಿಪತಿಗಳ । ಪದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವಾ ॥ ೨೪ ॥

ಸೂತ್ರನಾಮಕ ಪ್ರಾಣಪತಿ ಗಾ- । ಯತ್ರಿ ಸಂಪ್ರತಿಪಾದ್ಯನಾಗೀ । ಗಾತ್ರದೊಳು ನೆಲಸಿರಲು ತಿಳಿಯದೆ ಕಂಡಕಂಡಲ್ಲೀ ॥ ಧಾತ್ರಿಯೊಳು ಸಂಚರಿಸಿ ಪುತ್ರಕ- । ಳತ್ರಸಹಿತನುದಿನದಿ ತೀರ್ಥ । ಕ್ಷೇತ್ರಯಾತ್ರೆಯು ಮಾಡಿದೆವು ಯೆಂದೆನುತ ಹಿಗ್ಗುವರು ॥ ೨೫ ॥

ನಾರಸಿಂಹ ಸ್ವರೂಪದೊಳಗೆ ಶ- । ರೀರನಾಮದಿ ಕರೆಸುವನು ಹದಿ- । ನಾರು ಕಳೆಗಳು ವೃಕ್ಷಲಿಂಗದಿ ಪುರುಷನಾಮಕನು ॥ ತೋರುವನು ಅನಿರುದ್ಧದೊಳು ಶಾಂ- । ತೀರಮಣ ಅನಿರುದ್ಧರೂಪದಿ । ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೇವರದೊಳಿದ್ದು ॥ ೨೬ ॥

ಮೊದಲು ತ್ವಕ್ಚರ್ಮಗಳು ಮಾಂಸವು । ರುಧಿರಮೇದೋಮಜ್ಜವಸ್ಥಿಗ- । ಳಿವರೊಳಗೆ ಏಕೋನಪಂಚಾಶನ್ಮರುದ್ಗಣವು । ನಿಧನಹಿಂಕಾರಾದಿ ಸಾಮಗ- । ಸದರ ನಾಮದಿ ಕರಸುತೊಂಭ- । ತ್ತಧಿಕನಾಲ್ವತ್ತೆನಿಪರೂಪದಿ ಧಾತುಗಳೊಳಿಪ್ಪ ॥ ೨೭ ॥

ಸಪ್ತಧಾತುಗಳೊಳಹೊರಗೆ ಸಂ- । ತಪ್ತಲೋಹಗತಾಗ್ನಿಯಂ ದದಿ । ಸಪ್ತಸಾಮಗನಿಪ್ಪನನ್ನಮಯಾದಿಕೋಶದೊಳು ॥ ಲಿಪ್ತನಾಗದೆ ತತ್ತದಾಹ್ವಯ । ಕ್ಲೃಪ್ತಭೋಗವ ಕೊಡುತ ಸ್ವಪ್ನಸು- । ಷುಪ್ತಿಜಾಗ್ರತೆ ಈವ ತೈಜಸಪ್ರಾಜ್ಞವಿಶ್ವಾಖ್ಯಾ ॥ ೨೮ ॥

ತೀವಿಕೊಂಡಿಹವಲ್ಲಿ ಮಜ್ಜಕ- । ಳೇವರದಿ ಯಂಗುಲಿಯ ಪರ್ವದ । ತಾವಿನಲಿ ಮುನ್ನೂರ ಆರವತ್ತೆನಿಪ ತ್ರಿಸ್ಥಳದಿ ॥ ಸಾವಿರದ ಎಂಭತ್ತು ರೂಪವ । ಕೋವಿದರು ಪೇಳುವರು ದೇಹದಿ । ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣಾ ॥ ೨೯ ॥

ಕೀಟ ಪೇಶಸ್ಕರಿ ನನವಿನಲಿ । ಕೀಟಭಾವವ ತೊರೆದು ತದ್ವತ್ । ಖೇಟರೂಪವನೈದಿಯಾಡುವ ತೆರದಿ ಭಕುತಿಯಲಿ ॥ ಕೈಟಭಾರಿ ಧ್ಯಾನ ದಿಂದೆ ಭ- । ವಾಟವಿಯನತಿಶೀಘ್ರದಿಂದಲಿ । ದಾಟಿ ಸಾರೂಪ್ಯವನು ಐಮವರಲ್ಪಜೀವಿಗಳು ॥ ೩೦ ॥

ಈ ಪರಿಯು ದೇಹದೊಳು ಭಗವ- । ದ್ರೂಪಗಳ ಪರಿಯದಲೆ ಮನದಿ ಪ- । ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರಿಗೆ ॥ ಗೋಪತಿ ಜಗನ್ನಾಥವಿಠಲ ಸ- । ಮೀಪಗನು ತಾನಾಗಿ ಸಂತತ ಸ್ವಾಪರೋಕ್ಷ್ಯೆಯ ಮಾಡಿ ಪೊರೆವನು ಎಲ್ಲಕಾಲದಲಿ ॥ ೩೧ ॥

ಅಂತು ಸಂಧಿ ೯ಕ್ಕೆ ಪದ ೨೭೭ಕ್ಕೆ ಉದಾತ್ತಾನುದಾತ್ತಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೧೦. ಸರ್ವಪ್ರತೀಕಸಂಧಿ.

## (ಸರ್ವಸಮರ್ಪಣಸಂಧಿ)

ಈ ಸಂಧಿಯಲ್ಲಿ ಪ್ರವಿತತನಾದ ಶ್ರೀಧರನನ್ನು ಸರ್ವತ್ರ ಚಿಂತಿಸುವ ವಿಧಾನವನ್ನು ಜನಗಳಿಗೆ ತಿಳಿಸುವರೆ ಉಪಕ್ರಮಿಸುತ್ತಾರೆ.

॥ ಶ್ರೀರಾಮಚಂದ್ರಾಯ ನಮಃ ॥

ರಾಗ ಸಾರಂಗ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀವ ಪರಬೊಮ್ಮನತಿವಿಮಲಾಂ- । ಗಾವಬದ್ಧರು ಯೆಂದೆನಿಸ ರಾ- । ಜೀವಭವ ಮೊದಲಾದಮರರನುದಿನದಿ ಹರಿಪದವಾ ॥ ಸೇವಿಪರಿಗನುಕೂಲರಲ್ಲದೆ । ತಾವು ಇವರನ ಕೆಡಿಸ ಬಲ್ಲರೆ । ಶ್ರೀವಿಲಾಸಾಸ್ಪದನ ದಾಸರಿಗುಂಟೆ ಅಪಜಯವು ॥ ೧ ॥

ಶ್ರೀದನಂಘ್ರಿಸರೋಜಯುಗಳೇ- । ಕಾದಶಸ್ಥಾನಾತ್ಮದೊಳಗಿ- । ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವೂ ॥ ಆದಿತೇಯರು ಸಂತತಾಧಿ । ವ್ಯಾಧಿಗಳ ಪರಿಹರಿಸುತವರನು । ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲೀ ॥ ೨ ॥

ಮೇದಿನಿಯ ಮೇಲುಳ್ಳ ಗೋಷ್ಪಾ- ।. ದೋದಕಗಳೆಲ್ಲಮಲತೀರ್ಥವು । ಪಾದಪಾದ್ರಿಧರಾತಳವು ಸುಕ್ಷೇತ್ರಜೀವಗಣಾ ॥ ಶ್ರೀದನ ಪ್ರತಿಮೆಗಳು ಇವರುಂ- । ಬೋದನವೆ ನೈವೇದ್ಯ ನಿತ್ಯದಿ । ಹಾದಿ ನಡವದೆ ನರ್ತನಗಳೆಂದರಿತವನೆ ಯೋಗಿ ॥ ೩ ॥

ಸರ್ವದೇಶವು ಪುಣ್ಯದೇಶವು । ಸರ್ವಕಾಲವು ಪುಣ್ಯಕಾಲವು । ಸರ್ವಜೀವರು ದಾನಪಾತ್ರರು ಮೂರುಲೋಕದೊಳು ॥ ಸರ್ವಮಾತು ಗಳೆಲ್ಲ ಮಂತ್ರವು । ಸರ್ವಕೆಲಸಗಳೆಲ್ಲ ಪೂಜೆಯು । ಶರ್ವವಂದ್ಯನ ವಿಮಲಮೂರ್ತಿ ಧ್ಯಾನವುಳ್ಳವಗೆ ॥ ೪ ॥

ದೇವಖಾತ ತಟಾಕ ವಾಪಿ ಸ- । ರೋವರಗಳಭಿಮಾನಿಸುರರು ಕ- । ಳೇವರದೊಳಿಹ ರೋಮಕೂಪಗಳೊಳಗೆ ತುಂಬಿಹರು ॥ ಆ ವಿಯ ದ್ಗಂಗಾದಿ ನದಿಗಳು । ಭಾವಿಸುವದೆಪ್ಪತ್ತೆರಡೆನಿಪ । ಸಾವಿರ ಸುನಾಡಿ ಗಳೊಳಗೆ ಪ್ರವಹಿಸುತಲಿಹವೆಂದೂ ॥ ೫ ॥

ಮೂರು ಕೋಟಿಯ ಮೇಲೆ ಶೋಭಿಪ । ಈರಧಿಕ ಎಪ್ಪತ್ತುಸಾ ವಿರ । ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ । ತಾ ರಮಿ ಸುತಿಹನೆಂದು ತಿಳಿದಿಹ । ಸೂರಿಗಳು ದೇವತೆಗಳವರ ಶ- । ರೀರಗಳು ಸುಕ್ಷೇತ್ರ ಅವರರ್ಚನೆಯೆ ಹರಿಪೂಜೇ ॥ ೬ ॥

ಶ್ರೀವರನಿಗಭಿಷೇಕವೆಂದರಿ- । ದೀವಸುಂಧರೆಯೊಳಗೆ ಬಲ್ಲವ- । ರಾವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ॥ ತಾವೊಲಿದು ಬಂದಲ್ಲಿ ನೆಲೆಗೊಂ- । ಡೀವವಖಿಳಾರ್ಥಗಳನರಿಯದ । ಜೀವರಮರತ ರಂಗಿಣಿಯನೈದಿದರು ಫಲವೇನು ॥ ೭ ॥

ನದನದಿಗಳಿಳೆಯೊಳಗೆ ಸರಿವವು । ಉದಧಿಪರಿಯಂತರದಿ ತರು ವಾ- । ಯದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ ॥ ವಿಧಿನಿಷೇಧ ಗಳಾಚರಿಸುವರು । ಬುಧರು ಭಗವದ್ರೂಪ ಸರ್ವ- । ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ ॥ ೮ ॥

ಕಲಿಯೆ ಮೊದಲಾದಖಿಳ ದಾನವ- । ರೊಳಗೆ ಬ್ರಹ್ಮಭವಾದಿ ದೇವ- । ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ ॥ ಕಲುಷಕರ್ಮವ ಮಾಡಿ ಮಾಡಿಸಿ । ಜಲರುಹೇಕ್ಷಣಗರ್ಪಿಸುತ ನಿ- । ಶ್ಚಲಸುಭಕ್ತಿಜ್ಞಾನಪೂರ್ಣರು ಸುಖಿಸರವರೊಳಗೆ ॥ ೯ ॥

ಆವ ಜೀವರೊಳಿದ್ದರಿನ್ನೇ- । ನಾವ ಕರ್ಮವ ಮಾಡಲಿನ್ನೇ- । ನಾವ ಗುಣರೂಪಗಳುಪಾಸನೆ ಮಾಡಲೇನವರೂ ॥ ಕಾವನಯ್ಯನ ಪರಮಪ ತ್ಕರು- । ಣಾವಲೋಕನಬಲದಿ ಚರಿಸುವ । ದೇವತೆಗಳನು ಮುಟ್ಟಲಾ ಪವೆ ಪಾಪಕರ್ಮಗಳು ॥ ೧೦ ॥

ಪತಿಯೊಡನೆ ಮನಬಂದ ತೆರದಲಿ । ಪ್ರತಿದಿವಸದಲಿ ರಮಿಸಿ ಮೋದಿಸಿ । ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು ॥ ಕೃತಿಪತಿಕಥಾಮೃತಸುಭೋಜನ । ರತಮಹಾತ್ಮರಿಗಿತರದೋಷ । ಪ್ರತತಿಗಳು ಸಂಬಂಧಿಸುವವೇಽಚ್ಯುತನ ದಾಸರಿಗೆ ॥ ೧೧ ॥

ಸೂಸಿ ಬಹ ನದಿಯೊಳಗೆ ತನ್ನ ಸ- । ಹಾಸತೋರುವೆನೆಂದು ಜಲ ಕೆದ- । ರೀಸಿದರೆ ಕೈಸೋತು ಮುಳುಗುವ ಹರಿಯು ಬಿಟ್ಟವನು ॥ ಕ್ಲೇಶವೈದುವನಾದಿಯುಲಿ ಸ- । ರ್ವೇಶಕ್ಲ್ಪಪ್ತಿಯು ಮಾಡಿಪುದ ಬಿ- । ಟ್ಟಾಶೆಯಿಂದಲಿ ಅನ್ಯರಾರಾಧಿಸುವ ಮಾನವನು ॥ ೧೨ ॥

ನಾನು ನನ್ನದು ಯೆಂಬ ಜಡಮತಿ । ಮಾನವರು ದಿನದಿನದಿ ಮಾಡುವ । ಸ್ನಾನಜಪದೇವಾರ್ಚನೆಯು ಮೊದಲಾದ ಕರ್ಮಗಳ ॥ ದಾನವರು ಕೆಳದೊಯ್ವರಲ್ಲದೆ । ಶ್ರೀನಿವಾಸನು ಸ್ವೀಕರಿಸ ಮ- । ದ್ದಾನೆ ಪಕ್ವ ಕಪಿತ್ಥಫಲ ಭಕ್ಷಿಸಿದವೋಲಹುದು ॥ ೧೩ ॥

ಧಾತ್ರಿಯೊಳಗುಳ್ಳಖಿಳ ತೀರ್ಥ । ಕ್ಷೇತ್ರ ಚರಿಸಿದರೇನು ಪಾತ್ರಾ- । ಪಾತ್ರವರಿತನ್ನಾದಿ ದಾನವ ಮಾಡಿ ಫಲವೇನು ॥ ಗಾತ್ರ ನಿರ್ಮಲನಾಗಿ ಮಂತ್ರ । ಸ್ತೋತ್ರಪಠಿಸಿದರೇನು ಹರಿ ಸ- । ರ್ವತ್ರಗತನೆಂದರಿಯದಲೆ ತಾ ಕರ್ತೃವೆಂಬವನು ॥ ೧೪ ॥

ಕಂಡ ನೀರೊಳು ಮುಳುಗಿ ದೇಹವ । ದಂಡಿಸಿದ ಫಲವೇನು ದಂಡ ಕ- । ಮಂಡಲಂಗಳ ಧರಿಸಿ ಯತಿಯೆಂದೆನಿಸಿ ಫಲವೇನು ॥ ಅಂಡಜಾಧಿಪನಂಸಗನ ಪದ । ಪುಂಡರೀಕದಿ ಮನವಹರ್ನಿಶಿ । ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು ॥ ೧೫ ॥

ವೇದಶಾಸ್ತ್ರಪುರಾಣಕಥೆಗಳ । ನೋದಿಪೇಳಿದರೇನು ಸಕಲ ನಿ- । ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನೂ ॥ ಓದಸಂಗಳ ಜರಿದು ಶ್ವಾಸ ನಿ- । ರೋಧಗೈಸಿದರೇನು ಕಾಮ । ಕ್ರೋಧವಳಿಯದೆ ನಾನು ನನ್ನದು ಯೆಂಬ ಮಾನವನು ॥ ೧೬ ॥

ಏನು ಕೇಳಿದರೇನು ನೋಡಿದ- । ರೇನು ಓದಿದರೇನು ಪೇಳಿದ- । ರೇನು ಪಾಡಿದರೇನು ಮಾಡಿದರೇನು ದಿನದಿನದಿ ॥ ಶ್ರೀನಿವಾಸನ ಜ್ಞಾನ ಕರ್ಮ ಸ- । ದಾನುರಾಗದಿ ನೆನದು ತತ್ತತ್ । ಸ್ಥಾನದಲಿ ತದ್ರೂಪ ತನ್ನಾಮಕನ ಸ್ಮರಿಸದವ ॥ ೧೭ ॥

ಬುದ್ಧಿವಿದ್ಯಾಬಲದಿ ಪೇಳಿದ । ಶುದ್ಧಕಾವ್ಯವಿದಲ್ಲ ತತ್ವಸು- । ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ॥ ಮಧ್ವವಲ್ಲಭ ತಾನೆ ಹೃದಯದೊ- । ಳಿದ್ದು ನುಡಿದಂದದಲಿ ನುಡಿದೆನ- । ಬದ್ಧಗಳ ನೋಡ ದಲೆ ಕಿವಿಗೊಟ್ಟಾಲಿಪುದು ಬುಧರು ॥ ೧೮ ॥

ಕಬ್ಬಿನೊಳಗಿಹ ರಸ ವಿದಂತನಿ- । ಗಬ್ಬಬಲ್ಲದೆ ಭಾಗ್ಯಯೌವನ । ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು ॥ ಲಭ್ಯವಾಗದು ಹರಿಪದಾಬ್ಜದಿ । ಹಬ್ಬಿದತಿಸದ್ಭಕ್ತಿರಸವುಂ- । ಡುಬ್ಬಿ ಕೊಬ್ಬಿ ಸುಖಾಬ್ಧಿ ಯೊಳಗಾಡುವವಗಲ್ಲದಲೆ ॥ ೧೯ ॥

ಖಗವರಧ್ವಜನಂಘ್ರಿಭಕುತಿಯು । ಬಗೆಯನರಿಯದ ಮಾನವರಿ ಗಿದು । ಒಗಟಿನಂದದಿ ತೋರುತಿಪ್ಪದು ಎಲ್ಲಕಾಲದಲೀ ॥ ತ್ರಿಗುಣವರ್ಜಿ ತನಮಲಗುಣಗಳ । ಪೊಗಳಿ ಹಿಗ್ಗುವ ಭಾಗವತರಿಗೆ । ಮಿಗೆಭಕುತಿ ಸುಜ್ಞಾನ ಸುಖವಿತ್ತವರ ರಕ್ಷಿಪುದು ॥ ೨೦ ॥

ಪರಮತತ್ವರಹಸ್ಯವಿದು ಭೂ- । ಸುರರು ಕೇಳ್ವದು ಸಾದರದಿ ನಿ- । ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿಪಿಶುನರಿಗೆ । ಅರಸಿಕರಿಗಿದು ಪೇಳ್ವದಲ್ಲನ- । ವರತಭಗವತ್ಪಾದಯುಗಳಾಂ- । ಬುರುಹಮಧುಕರರೆ ನಿಸುವರಿಗರುಪುವದು ಮೋದದಲೀ ॥ ೨೧ ॥

ಲೋಕವಾರ್ತೆಯಿದಲ್ಲ ಪರಲೋ- । ಕೈಕನಾಥನ ವಾರ್ತೆಕೇಳ್ವರೆ । ಕಾಕುಮನುಜರಿಗಿದು ಸಮರ್ಪಕವಾಗಿ ಸೊಗಸುವುದೇ ॥ ಕೋಕನದ ಪರಿಮಳವು ಷಟ್ಪದ । ಸ್ವೀಕರಿಸುವಂದದಲಿ ಜಲಚರ । ಭೇಕ ಬಲ್ಲುದೆ ಇದರ ರಸ ಹರಿಭಕ್ತಗಲ್ಲದಲೆ ॥ ೨೨ ॥

ಸ್ವಪ್ರಯೋಜನ ರಹಿತ ಸಕಲೇ- । ಷ್ಟಪ್ರದಾಯಕ ಸರ್ವಗುಣ ಪೂ- । ರ್ಣಪ್ರಮೇಯ ಜರಾಮರಣವರ್ಜಿತ ವಿಗತಶೋಕಾ ॥ ವಿಪ್ರ ತಮ ವಿಶ್ವಾತ್ಮ ಘೃಣಿಸೂ- । ರ್ಯಪ್ರಕಾಶಾನಂತಮಹಿಮ ಘೃ- । ತ ಪ್ರತೀಕಾರಾಧಿತಾಂಘ್ರಿಸರೋಜ ಸುರರಾಜಾ ॥ ೨೩ ॥

ವನಚರಾದ್ರಿಧರಾಧರನೆ ಜಯ । ಮನುಜಪ್ರಗವರವೇಷ ಜಯ ವಾ- । ಮನ ತ್ರಿವಿಕ್ರಮದೇವ ಜಯ ಭೃಗುರಾಮ ಭೂಮ ಜಯ ॥ ಜನಕಜಾವಲ್ಲಭನೆ ಜಯ ರು- । ಗ್ಮಿಣಿಮನೋರಥಸಿದ್ಧಿದಾಯಕ । ಜಿನ ವಿಮೋಹಕ ಕಲಿವಿದಾರಣ ಜಯ ಜಯಾರಮಣ ॥ ೨೪ ॥

ಸಚ್ಚಿದಾನಂದಾತ್ಮ ಬ್ರಹ್ಮಕ- । ರಾರ್ಚಿತಾಂಘ್ರಿಸರೋಜ ಸುಮ ನಸ । ಪ್ರೋಚ್ಚಸನ್ಮಂಗಳದ ಮಧ್ವಾಂತಃಕರಣರೂಢಾ ॥ ಅಚ್ಯುತ ಜಗ ನ್ನಾಥವಿಟ್ಠಲ । ನಿಚ್ಚ ಮೆಚ್ಚಿದ ಜನರ ಬಿಡ ಕಾ- । ರ್ಢ್ಗಿಚ್ಚುಗೊಂಡಾರ ಣ್ಯದೊಳು ಗೋಗೋಪರನು ಕಾಯ್ದ ॥ ೨೫ ॥

ಅಂತು ಸಂಧಿ ೧೦ಕ್ಕೆ ಪದ ೩೦೨ಕ್ಕೆ ಸರ್ವಪ್ರತೀಕಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೧೧. ಧ್ಯಾನಪ್ರಕ್ರಿಯಾಸಂಧಿ.

### (ಸ್ಥಾವರಜಂಗಮಸಂಧಿ)

ಇದರಲ್ಲಿ ಅಧಿಕಾರಿಯಾದವ ನಿಷ್ಕಾಮಕರ್ಮ ಮಾಡುವ ವಿಧಿಯೂ, ದೇಹದಲ್ಲಿಯ ನಾಡಿಗಳ ವಿಚಾರವೂ, ಇಂದ್ರಿಯಗಳ ನಿಯಾಮಕ ಕ್ರಮವೂ, ವ್ಯತಿರೇಕ ಪೂಜಾಕ್ರಮವೂ, ಪ್ರತಿಮಾಪೂಜಾ ಗೋಳಕಗಳ ವಿಚಾರವೂ, ಹೇಳುವದಲ್ಲದೆ, ದಾರಾಪತ್ಯಾದಿಗಳೇ ಗತಿಪ್ರದರೆಂತ ತಿಳಿಯಕೂಡದು, ಸರ್ವತ್ರಗತ ಪರಮಾತ್ಮನೇ ಇಷ್ಟದಾಯಕನೆಂತ ಅನುಸಂಧಾನ ಮಾಡಿಕೊಂಡಿರಬೇಕೆಂತಲೂ ಹೇಳುತ್ತಾರೆ

---

॥ ಶ್ರೀಜಗನ್ನಾಥಾಯ ನಮಃ ॥

ರಾಗ ಪಂತುವರಾಳಿ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಹೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಪಾದುಕೆಯು ಕಂಟಕ ಸಿಕತ ಮೊದ- । ಲಾದವನುದಿನ ಬಾಧಿಸುವವೇ- । ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ॥ ಸಾದರದಿ ನೆನವವನು ಯೋನಪ- । ರಾಧಗಳ ಮಾಡಿದರು ಸರಿಯೆ ನಿ- । ರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು ॥ ೧ ॥

ಹಗಲು ನಂದಾದೀಪದಂದದಿ । ನಿಗಮವೇದ್ಯನ ಪೂಜಿಸುತ ಕೈ- । ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ॥ ಜಗದುದರ ಕೊಟ್ಟದನು ಭುಂಜಿಸು । ಮಗ ಮಡದಿ ಪ್ರಾಣೇಂದ್ರಿಯಾತ್ಮಾ- । ದಿಗಳು ಭಗವದಧೀನವೆಂದಡಿಗಡಿಗೆ ನೆನವುತಿರೂ ॥ ೨ ॥

ಅಸ್ವತಂತ್ರನು ಜೀವ ಹರಿ ಸ- । ರ್ವಸ್ವತಂತ್ರನು ನಿತ್ಯಸುಖಮಯ । ನಿಃಸ್ವಬದ್ಧಾಲ್ಪಜ್ಞಶಕ್ತಿ ಸುದುಃಖನಿರ್ವಿಣ್ಣಾ ॥ ಹ್ರಸ್ವದೇಹಿ ಸನಾಥ ಜೀವನು । ವಿಶ್ವವ್ಯಾಪಕ ಕರ್ತೃ ಬ್ರಹ್ಮ ಸ- । ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ॥ ೩ ॥

ಮತ್ತೆ ವಿಶ್ವಾದ್ಯೆಂಟುರೂಪೊಂ- । ಭತ್ತರಿಂದಲಿ ಪೆಚ್ಚಿಸಲು ಎ- । ಪ್ಪತ್ತೆರಡು ರೂಪಗಳಹವು ವೊಂದೊಂದೆ ಸಾಹಸ್ರಾ ॥ ಪೃಥ್ಪೃಥಕು ನಾಡಿಗಳೊಳಗೆ ಸ- । ರ್ವೋತ್ತಮನ ತಿಳಿಯೆಂದು ಭೀಷ್ಮನು । ವಿಸ್ತರಿಸಿದನು ಧರ್ಮತನಯಗೆ ಶಾಂತಿಪರ್ವದಲಿ ॥ ೪ ॥

ಎಂಟುಪ್ರಕೃತಿಗಳೊಳಗೆ ವಿಶ್ವಾ- । ದ್ಯೆಂಟು ರೂಪದಲಿದ್ದು ಭಕತರ । ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ ॥ ನೆಂಟನಂದದಿ ಎಡೆಬಿಡದೆ ವೈ- । ಕುಂಠರಮಣನು ತನ್ನವರ ನಿ- । ಷ್ಕಂಟಕ ಸುಮಾರ್ಗದಲಿ ನಡೆಸುವ ದುರ್ಜನರ ಬಡಿವ ॥ ೫ ॥

ಸ್ವರಮಣನು ಶಕ್ತ್ಯಾದಿರೂಪದಿ । ಕರಣಮಾನಿಗಳೊಳಗೆ ನೆಲಸಿ- । ದ್ದರವಿದೂರನು ಸ್ಥೂಲವಿಷಯಗಳುಂಡುಣಿಪ ನಿತ್ಯಾ ॥ ಅರಿಯದಲೆ ತಾನುಂಬೆನೆಂಬವ । ನಿರಯಗಳನುಂಬುವನು ನಿಶ್ಚಯ । ಮರಳಿಮರಳಿ ಭವಾಟವಿಯ ಸಂಚರಿಸಿ ಬಳಲುವನು ॥ ೬ ॥

ಸುರುಚಿ ರುಚಿರ ಸುಗಂಧ ಶುಚಿಯೆಂ- । ದರಿತಿಹನು ಷಡ್ರಸಗಳೊಳು ಹ- । ನ್ನೆರಡುರೂಪದಲಿಪ್ಪ ಶ್ರೀಭೂದುರ್ಗೆಯರ ಸಹಿತ ॥ ಸ್ವರಮಣನು ಎಪ್ಪತ್ತೆರಡು ಸಾ- । ವಿರ ಸವಿಕಾರನ ರೂಪದೊಳಗಿ- । ದ್ದುರುಪರಾಕ್ರಮ ಕರ್ತೃಯೆನಿಸುವ ನಾಡಿಯೊಳಗಿದ್ದು ॥ ೭ ॥

ನಿನ್ನ ಸರ್ವತ್ರದಲಿ ನೆನವವ- । ರನ್ಯಕರ್ಮವ ಮಾಡಿದರು ಶರಿ । ಪುಣ್ಯಕರ್ಮಗಳೆನಿಸುವವು ಸಂದೇಹವಿನಿತಿಲ್ಲ ॥ ನಿನ್ನ ಸ್ಮರಿಸದೆ ಸ್ನಾನ ಜಪಹೋ- । ಮಾನ್ನವಸ್ತ್ರ ಗಜಾಶ್ವ ಭೂಧನ । ಧಾನ್ಯ ಮೊದಲಾದಖಿಳ ದಾನವ ಮಾಡಿ ಫಲವೇನು ॥ ೮ ॥

ಇಷ್ಟಭೋಗ್ಯಪದಾರ್ಥದೊಳು ಶಿಪಿ- । ವಿಷ್ಟನಾಮದಿ ಸರ್ವಜೀವರ । ತುಷ್ಟಿಬಡಿಸುವ ದಿನದಿನದಿ ಸಂತುಷ್ಟ ತಾನಾಗಿ ॥ ಕೋಷ್ಠದೊಳು ನೆಲಸಿದ್ದು ರಸಮಯ । ಪುಷ್ಟಿಯೈದಿಸುತಿಂದ್ರಿಯಗಳೊಳು । ಪ್ರೇಷ್ಠನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ ॥ ೯ ॥

ಕಾರಕಾಹ್ವಯ ಜ್ಞಾನಕರ್ತೃ । ಪ್ರೇರಕನು ತಾನಾಗಿ ಕ್ರಿಯೆಗಳ । ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲಸಿದ್ದು ॥ ಮೂರುಗುಣಮಯ ದ್ರವ್ಯಗ ತದಾ- । ಕಾರ ತನ್ನಾಮದಲಿ ಕರೆಸುವ । ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ॥ ೧೦ ॥

ದ್ರವ್ಯವೆನಿಸುವ ಭೂತ ಮಾತ್ರದೊ- । ಳವ್ಯಯನು ಕರ್ಮೇಂದ್ರಿಯಗಳೊಳು । ಭವ್ಯ ಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು ॥ ಸ್ತವ್ಯಕಾರಕನೆನಿಸಿ ಸುಖಮಯ । ಸೇವ್ಯ ಸೇವಕನೆನಿಸಿ ಜಗದೊಳು । ಹವ್ಯವಾಹನನರಣಿಯೊಳಗಿಪ್ಪಂತೆ ಇರುತಿಪ್ಪಾ ॥ ೧೧ ॥

ಮನವೆ ಮೊದಲಾದಿಂದ್ರಿಯಗಳೊಳ- । ಗನಿಲದೇವನು ಶುಚಿಯೆನಿಸಿಕೊಂ- । ಡನವರತ ನೆಲಸಿಪ್ಪ ಶುಚಿಷದ್ಯೋತನೆಂದೆನಿಸಿ ॥ ತನುವಿನೊಳಗಿಪ್ಪನು ಸದಾ ಮಃ- । ಮನ ಹೃಷೀಕೇಶಾಖ್ಯರೂಪದ- । ಲನುಭವಕೆ ತಂದೀವ ವಿಷಯಜಸುಖವ ಜೀವರಿಗೆ ॥ ೧೨ ॥

ಪ್ರೇರಕಪ್ರೇರ್ಯರೊಳು ಪ್ರೇರ್ಯ । ಪ್ರೇರಕನು ತಾನಾಗಿ ಹರಿನಿ- । ವ್ಯೆರದಿಂದ ಪ್ರವರ್ತಿಸುವ ತನ್ನಾಮರೂಪದಲಿ ॥ ತೋರಿಕೊಳ್ಳದೆ ಸರ್ವರೊಳು ಭಾ- । ಗೀರಥೀಜನಕನು ಸಕಲ ವ್ಯಾ- । ಪಾರಗಳ ತಾ ಮಾಡಿ ಮಾಡಿಸಿ ನೋಡಿ ನಗುತಿಪ್ಪಾ ॥ ೧೩ ॥

ಹರಿಯೆ ಮುಖ್ಯ ನಿಯಾಮಕನು ಎಂ- । ದರಿದು ಪುಣ್ಯಾಪುಣ್ಯ ಹರುಷಾ । ಮರುಷ ಲಾಭಾಲಾಭ ಸುಖದುಃಖಾದಿ ದ್ವಂದ್ವಗಳಾ ॥ ನಿರುತ ಅವನಂಘ್ರಿಗೆ ಸಮರ್ಪಿಸಿ । ನರಕಭೂಸ್ವರ್ಗಾಪವರ್ಗದಿ । ಕರಣ ನೀಯಾಮಕನ ಸರ್ವತ್ರದಲಿ ನೆನವುತಿರೂ ॥ ೧೪ ॥

ಮಾಣವಕ ತತ್ಫಲಗಳನುಸಂ । ಧಾನವಿಲ್ಲದೆ ಕರ್ಮಗಳ ಸ್ವೇ- । ಚ್ಛಾನುಸಾರದಿ ಮಾಡಿ ಮೋಹಿಸುವಂತೆ ಪ್ರತಿದಿನದಿ ॥ ಜ್ಞಾನಪೂರ್ವಕ ವಿಧಿನಿಷೇಧಗ- । ಳೇನು ನೋಡದೆ ಮಾಡು ಕರ್ಮ ಪ್ರ- । ಧಾನ ಪುರುಷೇಶನಲಿ ಭಕುತಿಯು ಬೇಡು ಕೊಂಡಾಡು ॥ ೧೫ ॥

ಹಾನಿ ವೃದ್ಧಿ ಜಯಾಪಜಯಗಳು । ಏನು ಕೊಟ್ಟದ ಭುಂಜಿಸುತಲ- । ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದೀ ॥ ಜ್ಞಾನಸುಖಮಯ ತನ್ನವರ ಪರ- । ಮಾನುರಾಗದಿ ಸಂತಯಿಪ ದೇ- । ಹಾನುಬಂಧಿಗಳಂತೆ ಒಳಹೊರಗಿದ್ದು ಕರುಣಾಳೂ ॥ ೧೬ ॥

ಆ ಪರಮ ಸಕಲೇಂದ್ರಿಯಗಳೊಳು । ವ್ಯಾಪಕನು ತಾನಾಗಿ ವಿಷಯವ । ತಾ ಪರಿಗ್ರಹಿಸುವನು ತಿಳಿಸದೆ ಸರ್ವಜೀವರೊಳೂ ॥ ಪಾಪರಹಿತ ಪುರಾಣಪುರುಷ ಸ- । ಮೀಪದಲಿ ನೆಲಸಿದ್ದು ನಾನಾ । ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ ॥ ೧೭ ॥

ಖೇಚರರು ಭೂಚರರು ವಾರಿನಿ । ಶಾಚರರೊಳಿದ್ದವರ ಕರ್ಮಗ- । ಳಾಚರಿಸುವನು ಘನಮಹಿಮ ಪರಮಾಲ್ಪನೋಪಾದೀ ॥ ಗೋಚರಿಸನು ಬಹುಪ್ರಕಾರಾ- । ಲೋಚನೆಯ ಮಾಡಿದರು ಮನಸಿಗೆ । ಕೀಚಕಾರಿಪ್ರಿಯ ಕವಿಜನಗೇಯ ಮಹರಾಯಾ ॥ ೧೮ ॥

ಒಂದೆ ಗೋತ್ರಪ್ರವರ ಸಂಧ್ಯಾ- । ವಂದನೆಗಳನು ಮಾಡಿ ಪ್ರಾಂತಕೆ । ತಂದೆತನಯರು ಬೇರೆ ತಮ್ಮಯ ಪೆಸರುಗೊಂಬಂತೆ ॥ ಒಂದೆ ದೇಹದೊಳಿದ್ದು ನಿಂದ್ಯಾ- । ನಿಂದ್ಯಕರ್ಮವ ಮಾಡಿ ಮಾಡಿಸಿ । ಇಂದಿರೇಶನು ಸರ್ವಜೀವರೊಳೀಶನೆನಿಸುವನೂ ॥ ೧೯ ॥

ಕಿಟ್ಟಗಟ್ಟಿದ ಲೋಹ ಪಾವಕ । ಸುಟ್ಟು ವಿಂಗಡ ಮಾಡುವಂತೆ ಘ- । ರಟ್ಟ ವ್ರೀಹಿಯೊಳಿಪ್ಪ ತಂಡುಲ ಕಡೆಗೆ ತೆಗೆವಂತೆ । ವಿಟ್ಠಲಾ ಎಂದೊಮ್ಮೆ ನೈಮರ- । ದಟ್ಟಹಾಸದಿ ಕರೆಯೆ ದುರಿತಗ- । ಳಟ್ಟುಳಿಯ ಬಿಡಿಸಿವನ ತನ್ನೊಳಗಿಟ್ಟು ಸಲಹುವನು ॥ ೨೦ ॥

ಜಲಧಿಯೊಳು ಸ್ವೇಚ್ಛಾನುಸಾರದಿ । ಜಲಚರಪ್ರಾಣಿಗಳು ತತ್ರತತ್ ॥ ಸ್ಥಳಗಳಲಿ ಸಂತೋಷಬಡುತಲಿ ಸಂಚರಿಸುವಂತೆ ॥ ನಳಿನನಾಭನೊಳಬ್ಜಭವ ಮು- । ಖ್ಯಾಳಲುರಗ ವೈಗಣ್ಣ ಮೊದಲಾ- । ಧಲವು ಜೀವರ ಗಣವು ವರ್ತಿಸುತಿಹದು ನಿತ್ಯದಲಿ ॥ ೨೧ ॥

ವಾಸುದೇವನು ಒಳಹೊರಗೆ ಯಾ- । ಭಾಸಕನು ತಾನಾಗಿ ಬಿಂಬಪ್ರ । ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರಾ ॥ ಈ ಸಮನ್ವಯವೆಂದೆನಿಪ ಸದು- । ಪಾಸನೆಯ ಗೈವವನು ಮೋಕ್ಷಾ- । ನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ॥ ೨೨ ॥

ಭೋಗ್ಯವಸ್ತುಗಳೊಳಗೆ ಯೋಗ್ಯಾ- । ಯೋಗ್ಯ ರಸಗಳನರಿತು ಯೋಗ್ಯಾ- । ಯೋಗ್ಯರಲಿ ನೆಲಸಿಪ್ಪ ಹರಿಗೆ ಸಮರ್ಪಿಸನುದಿನದಿ ॥ ಭಾಗ್ಯಬಡತನ ಬರಲು ಹಿಗ್ಗದೆ । ಕುಗ್ಗಿ ಸೊರಗದೆ ಸದ್ಭಕುತಿ ವೈ- । ರಾಗ್ಯಗಳನೇ ಮಾಡು ನೀ ನಿಭಾಗ್ಯನೆನಿಸದಲೆ ॥ ೨೩ ॥

ಸ್ಥಳಜಲಾದ್ರಿಗಳಲ್ಲಿ ಜನಿಸುವ । ಫಲ ಸುಪುಷ್ಪಜಗಂಧ ರಸ ಶ್ರೀ- ತುಲಸಿ ಮೊದಲಾದಖಿಳ ಪೂಜಾಸಾಧನಪದಾರ್ಥ ॥ ಹಲವುಬಗೆಯಿಂದರ್ಪಿಸುತ ಬಾಂ- । ಬೊಳೆಯ ಜನಕಗೆ ನಿತ್ಯನಿತ್ಯದಿ । ತಿಳಿವುದಿವು ವ್ಯತಿರೇಕಪೂಜೆಗಳೆಂದು ಕೋವಿದರೂ ॥ ೨೪ ॥

ಶ್ರೀಕರನ ಸರ್ವತ್ರದಲಿ ಅವ- । ಲೋಕಿಸುತ ಗುಣರೂಪಕ್ರಿಯ ವ್ಯತಿ- । ರೇಕ ತಿಳಿಯದಲನ್ವಯಿಸು ಬಿಂಬನಲಿ ಮರೆಯದಲೆ ॥ ಸ್ವೀಕರಿಸುವನು ಕರುಣದಿಂದ ನಿ- । ರಾಕರಿಸದೆ ಕೃಪಾಳು ಭಕ್ತರ । ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವಾ ॥ ೨೫ ॥

ಇನಿತು ವ್ಯತಿರೇಕಾನ್ವಯಗಳಿಂ- । ದೆನಿಪ ಪೂಜಾವಿಧಿಗಳನೆ ತಿಳಿ- । ದನಿಮಿಷೇಶನ ತೃಪ್ತಿಬಡಿಸುತಲಿರು ನಿರಂತರದಿ ॥ ಘನಮಹಿಮ ಕೈಕೊಂಡು ಸ್ಥಿತಿಮೃತಿ । ಜನುಮಗಳ ಪರಿಹರಿಸಿ ಸೇವಕ । ಜನರೊಳಿಟ್ಟಾನಂದಬಡಿಸುವ ಭಕ್ತವತ್ಸಲನೂ ॥ ೨೬ ॥

ಜಲಜನಾಭನಿಗೆರಡು ಪ್ರತಿಮೆಗ- । ಳಿಳೆಯೊಳಗೆ ಜಡಚೇತನಾತ್ಮಕ । ಚಲದೊಳಿರ್ಬಗೆ ಸ್ತ್ರೀಪುರುಷಭೇದದಲಿ ಜಡದೊಳಗೇ ॥ ತಿಳಿವದಾಹಿತಪ್ರತಿಮೆ ಸಹಜಾ- । ಚಲಗಳೆಂದಿರ್ಬಗೆ ಪ್ರತೀಕದಿ । ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು ॥ ೨೭ ॥

ವಾರಿಜಾಸನ ವಾಯು ವೀಂದ್ರ ಉ- । ಮಾರಮಣ ನಾಕೇಶ ಸ್ಮರಹಂ- । ಕಾರಿಕ ಪ್ರಾಣಾದಿಗಳು ಪುರುಷರ ಕಳೇವರದಿ ॥ ತೋರಿಕೊಳದನಿರುದ್ಧದೋಷವಿ- । ದೂರನಾರಾಯಣನ ರೂಪಶ- । ರೀರಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು ॥ ೨೮ ॥

ಸಿರಿ ಸರಸ್ವತಿ ಭಾರತೀ ಸೌ- । ಪರಣಿ ವಾರುಣಿ ಪಾರ್ವತೀಮುಖ- । ರಿರುತಿಹರು ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ ॥ ಅರುಣವರ್ಣನಿಭಾಂಗ ಶ್ರೀಸಂ- । ಕರುಷಣ ಪ್ರದ್ಯುಮ್ನರೂಪಗ- । ಳಿರುಳುಹಗಲೂಪಾಸನೆಯ ಗೈಯುತಲೆ ಮೋದಿಪರು ॥ ೨೯ ॥

ಕೃತಪ್ರತೀಕದಿ ಟಂಕಿಭಾರ್ಗವ । ಹುತವಹಾನಿಲಮುಖ್ಯದಿವಿಜರು । ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲಸಿದ್ದು ॥ ಪ್ರತಿದಿವಸ ಶ್ರೀತುಳಸಿಗಂಧಾ- । ಕ್ಷತೆ ಕುಸುಮಫಲದೀಪ ಪಂಚಾ- । ಮೃತದಿ ಪೂಜಿಪ ಭಜಕರಿಗೆ ಕೊಡುತಿಹರು ಪುರುಷಾರ್ಥ ॥ ೩೦ ॥

ನಗಗಳಭಿಮಾನಿಗಳೆನಿಪ ಸುರ- । ರುಗಳು ಸಹಜಾಚಲಗಳಿಗೆ ಮಾ- । ನಿಗಳೆನಿಸಿ ಶ್ರೀವಾಸುದೇವನ ಪೂಜಿಸುತಲಿಹರು ॥ ಸ್ವಗತಭೇದವಿವರ್ಜಿತನ ನಾ- । ಲ್ಬಗೆ ಪ್ರತೀಕದಿ ತಿಳಿದು ಪೂಜಿಸೆ । ವಿಗತ ಸಂಸಾರಾಬ್ಧಿ ದಾಂಟಿಸಿ ಮುಕ್ತರನು ಮಾಳ್ಪ ॥ ೩೧ ॥

ಆವ ಕ್ಷೇತ್ರಕೆ ಪೋದರೇನಿ- । ನ್ನಾವ ತೀರ್ಥದಿ ಮುಳುಗಲೇನಿ- । ನ್ನಾವ ಜಪತಪಹೋಮದಾನವ ಮಾಡಿ ಫಲವೇನು ॥ ಶ್ರೀವರಜಗನ್ನಾಥವಿಠಲನ । ಈ ವಿಧದಿ ಜಂಗಮವು ಸ್ಥಾವರ । ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವರೂ ॥ ೩೨ ॥

ಅಂತು ಸಂಧಿ ೧೧ಕ್ಕೆ ಪದ ೩೩೮ಕ್ಕೆ ಧ್ಯಾನಪ್ರಕ್ರಿಯಾಸಂಧಿ ಸಮಾಪ್ತ.

# ೧೨. ನಾಡೀಪ್ರಕರಣಸಂಧಿ.

ಇದರಲ್ಲಿ ನಾಡಿಗತನದನದಿಗಳಲ್ಲಿ ವಿದ್ಯಮಾನವಾದಂಥ ಷಟ್ತ್ರಿಂಶತ್ಸಹಸ್ರ ಕುಟುಂಬ ಸಮೇತನಾದ ಆತ್ಮಾಖ್ಯಬಿಂಬನ ಸ್ಮರಣೆ ಮಾಡಿದಂಥ ಪುರುಷನು ಸಮಸ್ತ ನದಿನದಗಳಲ್ಲಿ ಸ್ನಾನಮಾಡಿದ ಫಲಕ್ಕೆ ಪಾತ್ರನಾಗುವದಲ್ಲದೆ ಭಗವದ್ರೂಪಗಳನ್ನು ಕಾಣುವನೆಂಬ ರಹಸ್ಯವನ್ನು ತಿಳಿಸುತ್ತಾರೆ.

॥ ಶ್ರೀಹಯಗ್ರೀವಾಯ ನಮಃ ॥

ರಾಗ ತೋಡಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಹೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ವಾಸುದೇವನು ಪ್ರಾಣಮುಖತ- । ತ್ವೇಶರಿಂದಲಿ ಸೇವೆಕೈಕೊಳು- । ತೀಶರೀರದೊಳಿಪ್ಪ ಮೂವತ್ತಾರು ಸಾಹಸ್ರ ॥ ಈ ಸುನಾಡಿಗಳೊಳಗೆ ಶ್ರೀಭೂ- । ವಿಾಸಮೇತ ವಿಹಾರಗೈವ ಪ- । ರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು ॥ ೧ ॥

ಚರಣಗಳೊಳಿಹ ನಾಡಿಗಳು ಪ- । ನ್ನೆರಡುಸಾವಿರ ಮಧ್ಯದೇಹದೊ- । ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ॥ ಶಿರದೊಳಾರು ಸಹಸ್ರ ಚಿಂತಿಸಿ । ಇರುಳುಹಗಲಭಿಮಾನಿ ದಿವಿಜರ- । ನರಿತು ಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ॥ ೨ ॥

ಬೃಹತಿನಾಮಕ ವಾಸುದೇವನು । ವಹಿಸಿ ಸ್ತ್ರೀರೂಪಗಳ ದೋಷವಿ- । ರಹಿತ ಎಪ್ಪತ್ತೆರಡುಸಾವಿರ ನಾಡಿಗಳೊಳಿದ್ದು ॥ ದ್ರುಹಿಣ ಮೊದಲಾದಮರ ಗಣಸ- । ನ್ಮಹಿತ ಸರ್ವಪ್ರಾಣಿಗಳ ಮಹ- । ಮಹಿಮ ಸಂತೈಸುವನು ಸಂತತ ಪರಮಕರುಣಾಳು ॥ ೩ ॥

ನೂರುವರುಷಕೆ ದಿವಸ ಮೂವ- । ತ್ತಾರುಸಾವಿರವಹವು ನಾಡಿ
ಶ- । ರೀರದೊಳಗಿನಿತಿಹವು ಯೆಂದರಿತೊಂದು ದಿವಸದಲಿ ॥ ಸೂರಿಗಳ
ಸತ್ಕರಿಸಿದವ ಪ್ರತಿ । ವಾರದಲಿ ದಂಪತಿಗಳರ್ಚನೆ । ತಾ ರಚಿಸಿದವ
ಸತ್ಯ ಸಂಶಯುವಿಲ್ಲವೆಂದೆಂದು ॥ ೪ ॥

ಚತುರವಿಂಶತಿ ತತ್ವಗಳು ತ- । ತ್ಪತಿಗಳೆನಿಸುವ ಬ್ರಹ್ಮಮುಖ
ದೇ- । ವತೆಗಳನುದಿನ ಪ್ರತಿಪ್ರತೀನಾಡಿಗಳೊಳಿರುತಿರ್ದುಕ ॥ ಚತುರದಶ
ಲೋಕದೊಳು ಜೀವ । ಪ್ರತತಿಗಳ ಸಂರಕ್ಷಿಸುವ ಶಾ- । ಶ್ವತನ ತತ್ತ
ತ್ಸ್ಥಾನದಲಿ ನೋಡುತಲೆ ಮೋದಿಸರೂ ॥ ೫ ॥

ಸತ್ಯಸಂಕಲ್ಪನು ಸದಾ ಎ- । ಪ್ಪತ್ತೆರಡುಸಾಹಸ್ರದೊಳು ಮೂ- ।
ವತ್ತು ನಾಲಕುಲಕ್ಷದೈವತ್ತಾರುಸಾಹಸ್ರಾ ॥ ಚಿತ್ರಕೃತಿಯೊಡಗೂಡಿ
ಪರಮಸು- । ನಿತ್ಯ ಮಂಗಳಮೂರ್ತಿ ಭಕ್ತರ । ತೆತ್ತಿಗನು ತಾನಾಗಿ ಸರ್ವ
ತ್ರದಲಿ ಸಂತೈಸಾ ॥ ೬ ॥

ಮಣಿಗಳೊಳಗಿಹ ಸೂತ್ರದಂದದಿ । ಪ್ರಣವಪಾದ್ಯನು ಸರ್ವಚೇ
ತನ । ಗಣದೊಳಿದ್ದನವರತ ಸಂತೈಸುವನು ತನ್ನವರ ॥ ಪ್ರಣತಕಾಮದ
ಭಕ್ತಚಿಂತಾ- । ಮಣಿ ಚಿದಾನಂದೈಕದೇಹನು । ಅಣುಮಹದ್ಗತನಲ್ಪ
ರೋಪಾದಿಯಲಿ ನೆಲಸಿಪ್ಪ ॥ ೭ ॥

ಈ ಸುಷುಮ್ನಾದ್ಯಖಿಳನಾಡೀ । ಕೋಶನಾಭೀಮೂಲದಲಿ ವೃಷ- ।
ಣಾಸನದ ಮಧ್ಯದಲಿ ಇಪ್ಪುದು ತುಂದಿನಾಮದಲಿ ॥ ಆ ಸರೋಜಾಸನ
ಮುಖರು ಮುಖ- । ಲೇಶನಾನಂದಾದಿ ಸುಗುಣೋ- । ಪಾಸನೆಯು ಗೈವು
ತಲಿ ದೇಹಗಳೊಳಗೆ ಇರುತಿಹರು ॥ ೮ ॥

ಸೂರಿಗಳು ಚಿತ್ತೈಸುವದು ಭಾ- । ಗೀರಥಿಯೆ ಮೊದಲಾದ ತೀರ್ಥ
ಗ- । ಳೀರಧಿಕಯೆಪ್ಪತ್ತುಸಾವಿರ ನಾಡಿಯೊಳಗಿಹವೂ ॥ ಈ ರಹಸ್ಯವನ
ಲ್ಪಜನರಿಗೆ । ತೋರಿ ಪೇಳದೆ ನಾಡಿನದಿಯೊಳು । ಧೀರರನುದಿನ ಮಜ್ಜ
ನವ ಮಾಡುತಲಿ ಸುಖಿಸುವರು ॥ ೯ ॥

ತಿಳಿವದೀದೇಹದೊಳಗಿಹ ಯೆಡ । ಬಲದ ನಾಡಿಗಳೊಳಗೆ ದಿವಿಜರು । ಜಲಜಸಂಭವ ವಾಯುವಾಣ್ಯಾದಿಗಳು ಬಲದಲ್ಲಿ ॥ ಎಲರುಣಿಗ ಪಿಹಗೇಂದ್ರ ಚಳಿವೆ- । ಟ್ವಳಿಯು ಷಣ್ಮಹಿಷಿಯರು ವಾರುಣಿ । ಕುಲಿಶಧರ ಕಾವಮಾದಿಗಳು ಎಡಭಾಗದೊಳಗಿಹರು ॥ ೧೦ ॥

ಇಕ್ಕೆಲದೊಳಿಹ ನಾಡಿಯೊಳು ದೇ- । ವರ್ಕಳಿಂದೊಡನಾಡುತಲಿ ಪೊಂ- । ಬಕ್ಕಿದೇರನು ಜೀವರಧಿಕಾರಾನುಸಾರದಲಿ ॥ ತಕ್ಕಸಾಧನ ಮಾಡಿ ಮಾಡಿಸು- । ತಕ್ಕರದಿ ಸಂತೈಪ ಭಕತರ । ದಕ್ಕಗೊಡನಸುರರ್ಗೆ ಸತ್ಪುಣ್ಯಗಳನಪಹರಿಪಾ ॥ ೧೧ ॥

ತುಂದಿವಿಡಿದಾ ಶಿರದ ಪರಿಯಂ- । ತೊಂದೆ ವ್ಯಾಪಿಸಿ ಯಿಹದು ತಾವರೆ । ಕಂದನಿಹನದರೊಳಗೆ ಅದಕೀರ್ರೈದು ಶಾಖೆಗಳೂ ॥ ಒಂದಧಿಕ ದಶಕರಣಗಳು ಸಂ- । ಬಂಧಗೈವಿಹವಲ್ಲಿ ರವಿಶಶಿ । ಸಿಂಧ ನಾಸತ್ಯಾದಿಗಳು ನೆಲೆಗೊಂಡಿಹರು ಸತತಾ ॥ ೧೨ ॥

ಪೊಕ್ಕಳಡಿವಿಡಿದೊಂದೆ ನಾಡಿಯು । ಸುಕ್ಕದಲೆ ಧಾರಾಳರೂಪದಿ । ಸಿಕ್ಕಿಹದು ನಡುದೇಹದೊಳಗೆ ಸುಷುಮ್ನನಾಮದಲಿ ॥ ರಕ್ಕಸರನೊಳಪೊಗಗೊಡದೆ ದಶ । ದಿಕ್ಕಿನೊಳಗೆ ಪವಿಾರದೇವನು । ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು ॥ ೧೩ ॥

ಇನಿತು ನಾಡೀಶಾಖೆಗಳು ಈ । ತನುವಿನೊಳಗಿಹವೆಂದು ಏಕಾ- । ತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳೂ ॥ ವನಿತೆಯಿಂದೊಡಗೂಡಿ ನಾರಾ- । ಯಣ ದಿವಾರಾತ್ರಿಯೊಳಗೀಪರಿ । ವನಜಜಾಂಡದೊಳಖಿಳ ಜೀವರೊಳಿದ್ದು ಮೋಹಿಸುವಾ ॥ ೧೪ ॥

ದಿನದಿನದಿ ವರ್ಧಿಸುವ ಕುಮುದಾ- । ಪ್ತನ ಮಯೂಖದ ಸೊಬಗುಗತಲೋ- । ಚನ ವಿಲೋಕಿಸಿ ಮೋದಬಡಬಲ್ಲನೆ ನಿರಂತರದಿ ॥ ಕುನರಗೀ ಸುಕಥಾಮೃತದ ಭೋ- । ಜನದ ಸುಖ ದೊರಕುವದೆ ಲಕ್ಷ್ಮೀ । ಮನೋಹರನ ಸದ್ಗುಣವ ಕೀರ್ತಿಪ ಭಕತಗಲ್ಲದಲೆ ॥ ೧೫ ॥

ಈ ತನುವಿನೊಳಗಿಹವು ವೋತ- । ಪ್ರೋತರೂಪದಿ ನಾಡಿಗಳು ಪುರು- । ಹೂತಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ ॥ ಭೀತಿಗೊಳಿಸುತ ದಾನವರ ಸಂ- । ಘಾತನಾಮಕ ಹರಿಯು ಗುಣ ಸಂ- । ಪ್ರೀತಿಯಲಿ ಸದುಪಾಸನೆಯ ಗೈಯುತಲೆ ಮೋದಿಪರು ॥ ೧೬ ॥

ಜಲಟಕುಕ್ಕುಟಖೇಟಜೀವರ । ಕಳೆವರಗಳೊಳಗಿದ್ದು ಕಾಣಿಸಿ- । ಕೊಳದೆ ತತ್ತದ್ರೂಪನಾಮಗಳಿಂದ ಕರೆಸುತಲಿ । ಜಲರುಹೇಕ್ಷಣ ವಿವಿಧ ಕರ್ಮಗ- । ಗಳ ನಿರಂತರ ಮಾಡಿ ಮಾಡಿಸಿ । ಫಲಗಳುಣ್ಣದೆ ಸಂಚರಿಸುವನು ನಿತ್ಯಸುಖಪೂರ್ಣ ॥ ೧೭ ॥

ತಿಳಿದುಪಾಸನೆ ಗೈವುತೀಪರಿ । ಮಲಿನನಂತಿರು ದುರ್ಜನರ ಕಂ- । ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ॥ ಮಳೆ ಬಿಸಿಲು ಹಸು ತೃಷೆ ಜಯಾಜಯ । ಖಳರ ನಿಂದಾನಿಂದೆ ಭಯಗಳಿ- । ಗಳುಕದಲೆ ಮುದ್ದಾನೆಯಂದದಿ ಚರಿಸು ಧರೆಯೊಳಗೆ ॥ ೧೮ ॥

ಕಾನನಗ್ರಾಮಸ್ಥ ಸರ್ವ । ಪ್ರಾಣಿಗಳು ಪ್ರತಿದಿವಸದಲಿ ಯೇ- ನೇನು ಮಾಡುವ ಕರ್ಮಗಳು ಹರಿಪೂಜೆಯೆಂದರಿದು ॥ ಧೇನಿಸುತ ಸದ್ಭಕ್ತಿಯಲಿ ಪವ- । ಮಾನಮುಖದೇವಾಂತರಾತ್ಮಕ । ಶ್ರೀನಿವಾಸನಿಗರ್ಪಿಸುತ ಮೋದಿಸುತ ನಲಿಯುತಿರು ॥ ೧೯ ॥

ನೋ ಕನೀಯನು ಲೋಕದೊಳು ಶುನಿ । ಸೂಕರಾದಿಗಳೊಳಗೆ ನೆಲಸಿ- । ದ್ದೇಕಮೇವಾದ್ವಿತಿಯ ಬಹುರೂಪಾಹ್ವಯಗಳಿಂದಾ ॥ ತಾ ಕರೆಸುತೊಳಗಿದ್ದು ತಿಳಿಸದೆ । ಶ್ರೀಕಮಲಭವ ಮುಖ್ಯ ಸಕಲದಿ- । ವೌಕಸಗಣಾರಾಧ್ಯ ಕೈಕೊಂಡನವರತ ಪೊರೆವ ॥ ೨೦ ॥

ಇನಿತುಪಾಸನೆಗೈವುತಿಹ ಸ- । ಜ್ಜನರು ಸಂಸಾರದಲಿ ಪ್ರತಿಪ್ರತಿ । ದಿನಗಳಲಿ ಯೇನೇನು ಮಾಡುವದೆಲ್ಲ ಹರಿಪೂಜೆ ॥ ಎನಿಸಿಕೊಂಬದು ಸತ್ಯವೀ ಮಾ- । ತಿನಲಿ ಸಂಶಯಬಡುವ ನರನ- । ಲ್ಪನು ಸುನಿಶ್ಚಯ ಬಾಹ್ಯಕರ್ಮವ ಮಾಡಿ ಫಲವೇನು ॥ ೨೧ ॥

ಭೋಗ್ಯಭೋಕ್ತೃಗಳೊಳಗೆ ಹರಿ ತಾ । ಭೋಗ್ಯಭೋಕ್ತನುಯೆ
ನಿಸಿ ಯೋಗ್ಯಾ- । ಯೋಗ್ಯರಸಗಳ ದೇವದಾನವಗಣಕೆ ವುಣಿಸುವನು ॥
ಭಾಗ್ಯನಿಧಿ ಭಕ್ತರ್ಗೆ ಸದ್ವೈ- । ರಾಗ್ಯಭಕ್ತಿಜ್ಞಾನವೀವನ- । ಯೋಗ್ಯರಿಗೆ
ದ್ವೇಷಾದಿಗಳ ತನ್ನಲ್ಲಿ ಕೊಡುತಿಪ್ಪ ॥ ೨೨ ॥

ಈ ಚತುರ್ದಶಭುವನದೊಳಗೆ ಚ- । ರಾಚರಾತ್ಮಕ ಜೀವರಲ್ಲಿ
ವಿ- । ರೋಚನಾತ್ಮಜವಂಚಕನು ನೆಲಸಿದ್ದು ದಿನದಿನದೀ ॥ ಯಾಚಕನು
ಎಂದೆನಿಸಿಕೊಂಬ ಮ- । ರೀಚಿದಮನ ಸುಹಂಸರೂಪಿ ನಿ- । ಷೇಚಕಾ
ಹ್ವಯನಾಗಿ ಜನರಭಿಲಾಷೆ ಪೂರೈಪಾ ॥ ೨೩ ॥

ಅನ್ನದನ್ನಾದನ್ನಮಯ ಸ್ವಯ- । ಮನ್ನ ಬ್ರಹ್ಮಾದ್ಯಖಿಳಚೇತನ-
ಕನ್ನಕಲ್ಪಕನಾಹನನಿರುದ್ಧಾದಿನಾಮದಲಿ ॥ ಅನ್ಯರನಪೇಕ್ಷಿಸದೆ ಗುಣ
ಕಾ- । ರುಣ್ಯಸಾಗರ ಸೃಷ್ಟಿಸುವನು ಹಿ- । ರಣ್ಯಗರ್ಭನೊಳಿದ್ದು ಪಾಲಿ
ಸುವನು ಜಗತ್ರಯವ ॥ ೨೪ ॥

ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ । ತ್ರಿಪಥಗಾಮಿಸಿಪಿತ ತ್ರಿವಿಕ್ರಮ ।
ಕೃಪಣವತ್ಸಲ ಕುವಲಯ ದಳಶ್ಯಾಮ ಸಿಸ್ಸೀಮಾ ॥ ಅಪರಿಮಿತಚಿತ್ಸುಖ
ಗುಣಾತ್ಮಕ- । ವಪುಷ ವೈಕುಂಠಾದಿಲೋಕಾ- । ಧಿಪ ತ್ರಯಿಾಮಯ
ತನ್ನವರ ನಿಷ್ಕಪಟದಿಂ ಪೊರೆವಾ ॥ ೨೫ ॥

ಲವಣಮಿಶ್ರಿತ ಜಲವು ತೋರ್ಪದು । ಲವಣದೋಷಾದಿಯಲಿ
ಜಿಹ್ವೆಗೆ । ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ ॥ ಸ್ವವಶ
ವ್ಯಾಪೀಯೆನಿಸಿ ಲಕ್ಷ್ಮೀ- । ಧವ ಚರಾಚರದೊಳಗೆ ತುಂಬಿಹ- । ನವಿದಿ
ತನ ಸಾಕಲ್ಯಬಲ್ಲವರಾರು ಧರೆಯೊಳಗೆ ॥ ೨೬ ॥

ವ್ಯಾಪ್ಯನಂದದಿ ಸರ್ವಜೀವರೊ- । ಳಿಪ್ಪ ಚಿನ್ಮಯ ಘೋರಭವ
ಸಂ- । ತಪ್ಯಮಾನರು ಭಜಿಸೆ ಭಕುತಿಗಳಿಂದಲಿಹಪರದಿ ॥ ಪ್ರಾಪ್ಯನಾ
ಗುವನವರವಗುಣಗ- । ಳೊಪ್ಪುಗೊಂಬನು ಭಕ್ತವತ್ಸಲ । ತಪ್ಪಿಸುವ
ಜನ್ಮಾದಿದೋಷಗಳವರಿಗನವರತ ॥ ೨೭ ॥

ಹಲವು ಬಗೆಯೊಳು ಹರಿಯು ಮನದೊಳು । ವಲಿಸಿ ನಿಲ್ಲಿಸಿ ಯೇನು ಮಾಡುವ । ಕೆಲಸಗಳ ಅವನಂಘ್ರಿಪೂಜೆಗಳೆಂದು ನೆನವುತಿರು ॥ ಹಲಧರಾನುಜ ತಾನೆ ಸರ್ವ । ಸ್ಥಳಗಳಲಿ ನೆಲಸಿದ್ದು ನಿಶ್ಚಂ- । ಚಲ ಭಕುತಿ ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ ॥ ೨೮ ॥

ದೋಷಗಂಧವಿದೂರ ನಾನಾ । ವೇಷಧಾರಕ ಈ ಜಗತ್ರಯ । ಪೋಷಕ ಪುರಾತನಪುರುಷ ಪುರುಹೂತಮುಖವಿನುತ ॥ ಶೇಷವರಶರಿ ಯಂಕಶಯನ ವಿ- । ಭೀಷಣಪ್ರಿಯ ವಿಜಯಸಖ ಸಂ- । ತೋಷಬಡಿ ಸುವ ಜನರಿಗಿಷ್ಟಾರ್ಥಗಳ ಪೂರೈಸಿ ॥ ೨೯ ॥

ಶ್ರೀಮಹೀಸೇವಿತಪದಾಂಬುಜ । ಭೂಮ ಸದ್ಭಕ್ತ್ಯೇಕಲಭ್ಯ ಪಿ- । ತಾಮಹಾದ್ಯಮರಾಸುರಾರ್ಚಿತ ಪಾದಪಂಕೇಜಾ ॥ ವಾಮ ವಾಮನ ರಾಮ ಸಂಸಾ- । ರಾಮಯೌಷಧ ಹೇ ಮಮಾಕುಲ । ಸ್ವಾಮಿ ಸಂತೈ ಸೆನಲು ಬಂದೊದಗುವನು ಕರುಣಾಳೂ ॥ ೩೦ ॥

ದನುಜದಿವಿಜರೊಳಿದ್ದು ಅವರವ- । ರನುಸರಿಸಿ ಕರ್ಮಗಳ ಮಾಳ್ಪನು । ಜನನಮರಣಾದ್ಯಖಿಳ ದೋಷವಿದೂರನೆಮ್ಮೊಡನೆ ॥ ಜನಿ ಸುವನು ಜೀವಿಸುವ ಸಂರ- । ಕ್ಷಣೆಯ ಮಾಡುವನೆಲ್ಲ ಕಾಲದಿ । ಧನವ ಕಾಯ್ದಿಹ ಸರ್ಪನಂತನಿಮಿತ್ತಬಾಂಧವನು ॥ ೩೧ ॥

ಬಿಸರುಹಾಪ್ತಾಗಸದಿ ತಾನುದ- । ಯಿಸಲು ವೃಕ್ಷಂಗಳ ನೆಳಲು ಪಸ- । ರಿಸುವವಿಳೆಯೊಳು ಅಸ್ತಮಿಸಲಲ್ಲಲ್ಲೆ ಲೀನಿಸವು ॥ ಶ್ವಸನಮು ಖ್ಯಮರಾಂತರಾತ್ಮಕ- । ನೊಳದೊಳಿಪ್ಪುದು ಈ ಜಗತ್ರಯ । ಬಸುರೊ ಳಂಬಿಟ್ಟಿಲ್ಲ ಕರ್ಮವ ತೋರ್ಪ ನೋಳ್ಪರಿಗೇ ॥ ೩೨ ॥

ತ್ರಿಭುವನೈಕಾರಾಧ್ಯ ಲಕ್ಷ್ಮೀ । ಸುಭುಜಯುಗಳಾಲಿಂಗಿತಾಂಗ- । ಸ್ವಭು ಸುಖಾತ್ಮ ಸುವರ್ಣವರ್ಣ ಸುಪರ್ಣವರವಹನಾ ॥ ಅಭಯದಾ ನಂತಾರ್ಕಶಶಿಸ- । ನ್ನಿಭ ನಿರಂಜನ ನಿತ್ಯದಲಿ ತನ- । ಗಭಿನಮಿಸುವ ರಿಗೀವ ಸರ್ವಾರ್ಥಗಳ ತಡೆಯದಲೆ ॥ ೩೩ ॥

ಕವಿಗಳಿಂದಲಿ ತಿಳಿದು ಪ್ರಾತ- । ಸ್ಸವನ ಮಾಧ್ಯಂದಿನವು ಸಾಯ ಮು । ಸವನಗಳು ವಸುರುದ್ರರಾದಿತ್ಯರೊಳು ರಾಜಿಸುವ ॥ ಪವನನೊಳು ಕೃತಿಜಯಸುಮಾಯಾ- । ಧವನ ಮೂರ್ತಿತ್ರಯುವ ಚಿಂತಿಸಿ । ದಿವಸ ವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರೂ ॥ ೩೪ ॥

ಚತುರವಿಂಶತ್ಯಬ್ದ ವಸುದೇ- । ವತೆಗಳೊಳು ಪ್ರದ್ಯುಮ್ನನಿಪ್ಪನು । ಚತುರಚತ್ವಾರಿಂಶತಿಗಳಲಿ ಸಂಕರುಷಣಾಖ್ಯ ॥ ಹುತವಹಾಕ್ಷನೊಳಿ ಹನು ಮಾಯಾ- । ಪತಿಯು ಹದಿನಾರಧಿಕದ್ವಾತ್ರಿಂ- । ಶತಿ ವರುಷಗಳ ಲಿಪ್ಪನಾದಿತ್ಯನೊಳು ಸಿತಕಾಯಾ ॥ ೩೫ ॥

ಷೋಡಶೋತ್ತರ ಶತವರುಷದಲಿ । ಷೋಡಶೋತ್ತರ ಶತಸುರೂ ಪದಿ ॥ ಕ್ರೀಡಿಸುವ ವಸುರುದ್ರರಾದಿತ್ಯರೊಳು ಸತಿಸಹಿತಾ ॥ ವ್ರೀಡೆಯಿ ಲ್ಲದೆ ಭಜಿಸ ಭಕತರ । ಪೀಡಿಸುವ ದುರಿತೌಘಗಳ ದೂ- । ರೋಡಿಸುವ ಬಳಿಯಲಿ ಬಿಡದೆ ನೆಲಸಿಪ್ಪ ಭಯಹಾರಿ ॥ ೩೬ ॥

ಮೂರಧಿಕಯೆಂಭತ್ತು ಸಹಸ್ರ- । ನೂರಯಿಪ್ಪತ್ತೆನಿಪ ರೂಪದಿ । ತೋರುತಿಪ್ಪ ದಿವಾನಿಶಾಧಿಪರೊಳಗೆ ನಿತ್ಯದಲಿ । ಭಾರತಿಪ್ರಾಣರೊಳ ಗಿದ್ದು ನಿ- । ವಾರಿಸುತ ಭಕತರ ದುರಿತ ಹಿಂ- । ಕಾರ ನಿಧನ ಪ್ರಥಮ ರೂಪದಿ ಪಿತೃಗಳನೆ ಪೊರೆವಾ ॥ ೩೭ ॥

ಬುದ್ಧಿಪೂರ್ವಕ ಉತ್ತಮೋತ್ತಮ । ಶುದ್ಧಪೂರ್ಣಾಂಬರವ ಪಂಕ ದೊ- । ಳದ್ದಿ ತೆಗೆಯಲು ಲೇಪವಾಗುವದೇ ಪರೀಕ್ಷಿಸಲು ॥ ಪದ್ಮನಾಭನು ಸರ್ವಜೀವರೊ- । ಳಿದ್ದರೇನು ಗುಣತ್ರಯಗಳಿಂ । ಬದ್ಧನಾಗುವನೇನೊ ನಿತ್ಯಸುಖಾತ್ಮಚಿನ್ಮಯನೂ ॥ ೩೮ ॥

ಸಕಲದೋಷವಿದೂರ ಶಶಿಪಾ- । ವಕ ಸಹಸ್ರಾನಂತಸೂರ್ಯ । ಪ್ರಕರಸನ್ನಿಭಗಾತ್ರ ಲಕುಮಿಕಳತ್ರ ಸುರಮಿತ್ರ ॥ ವಿಖನಸಾಂಡದೊಳಿಪ್ಪ ಬ್ರಹ್ಮಾ- । ದ್ಯಖಿಳ ಚೇತನ ಗಣಕೆ ತಾನೇ । ಸಖನೆನಿಸಿಕೊಂಡಕುಟಿಲಾ ತ್ಮಕನಿಪ್ಪನವರಂತೆ ॥ ೩೯ ॥

ದೇಶಭೇದಗಳಲ್ಲಿ ಇಪ್ಪಾ- । ಕಾಶದೋಪಾದಿಯಲಿ ಚೇತನ । ರಾಶಿಯೊಳು ನೆಲಸಿಪ್ಪನವ್ಯವಧಾನದಲಿ ನಿರುತಾ ॥ ಶ್ರೀಸಹಿತ ಸರ್ವತ್ರ ನಿರವಾ- । ಕಾಶ ಕೊಡುವಂದದಲಿ ಕೊಡುತ ನಿ- । ರಾಶೆಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದಾ ॥ ೪೦ ॥

ಶ್ರೀವಿರಿಂಚಾದ್ಯಮರಗಣ ಸಂ- । ಸೇವಿತಾಂಘ್ರಿಸರೋಜ ಈ ಜಡ । ಜೀವರಾಶಿಗಳೊಳಹೊರಗೆ ನೆಲಸಿದ್ದು ನಿತ್ಯದಲಿ ॥ ಸಾವಕಾಶನು ಯೆನಿಸಿ ತನ್ನ ಕ- । ಳೇವರದಲಿಂಬಿಟ್ಟು ಸಲಹುವ । ದೇವದೇವಕಿರಮಣ ದಾನವ ಹರಣ ಜಿತಮರಣಾ ॥ ೪೧ ॥

ಮಾಸವೊಂದಕೆ ಪ್ರತಿದಿವಸದಲಿ । ಶ್ವಾಸಗಳು ಅಹವಷ್ಟಚತ್ವಾ- । ರಿಂಶತಿ ಸಹಸ್ರಾಧಿಕಾರು ಸುಲಕ್ಷ ಸಂಖ್ಯೆಯಲಿ ॥ ಹಂಸನಾಮಕ ಹರಿಯು ಷೋಡಶ । ಈ ಶತಾಬ್ದದಿ ಭಜಿಸೆ ವಲಿವ ದ- । ಯಾಸಮುದ್ರ ಕುಚೇಲಗೊಲಿದಂದದಲಿ ದಿನದಿನದಿ ॥ ೪೨ ॥

ಸ್ಥೂಲದೇಹದೊಳಿದ್ದು ವರುಷಕೆ । ಏಳಧಿಕಯೆಪ್ಪತ್ತುಲಕ್ಷದ । ಮೇಲೆ ಎಪ್ಪತ್ತಾರುಸಾವಿರ ಶ್ವಾಸಜಪಗಳನು ॥ ಫಾಳಿದೇವನು ಕರುಣದಲಿ ಈ- । ರೇಳುಲೋಕದೊಳುಳ್ಳ ಚೇತನ । ಜಾಲದೊಳು ಮಾಡುವನು ತ್ರಿಜಗದ್ವ್ಯಾಪ್ತ ಪರಮಾತ್ಮ ॥ ೪೩ ॥

ಈರೆರಡುದೇಹಗಳೊಳಿದ್ದು ಸ- । ಮೀರದೇವನು ಶ್ವಾಸಜಪ ನಾ- । ನೂರಧಿಕವಾಗಿಪ್ಪ ಯೆಂಭತ್ತಾರು ಸಾಹಸ್ರಾ ॥ ತಾ ರಚಿಸುವನು ದಿವಸವೊಂದಕೆ । ಮೂರುವಿಧ ಜೀವರೊಳಗಿದ್ದು ಖ- । ರಾರಿಕರುಣಾಬಲವದೆಂತುಟೊ ಪವನರಾಯನೊಳು ॥ ೪೪ ॥

ಶ್ರೀಧವ ಜಗನ್ನಾಥವಿಠಲನು । ತಾ ದಯದಿ ವದನದೊಳು ನುಡಿದೋ- । ಪಾದಿಯಲಿ ನಾ ನುಡಿದೆನಲ್ಲದೆ ಕೇಳಿ ಬುಧಜನರು ॥ ಸಾಧುಲಿಂಗ ಪ್ರದರ್ಶಕರು ನಿ- । ಷೇಧಿಸಿದರೇನಹುದು ಯೆನ್ನಪ- । ರಾಧವೇನಿದರೊಳಗೆ ಪೇಳ್ವದು ತಿಳಿದು ಕೋವಿದರು ॥ ೪೫ ॥

ಅಂತು ಸಂಧಿ ೧೨ಕ್ಕೆ ಪದ ೬೭೮ಕ್ಕೆ ಕರುಣಾಸಂಧಿ ಸಮಾಪ್ತ.

## ೧೩. ನಾಮಸ್ಮರಣಸಂಧಿ.

ಈ ಸಂಧಿಯಲ್ಲಿ ದಾಸರಾಯರು ಹರಿಯನಾಮೋಚ್ಚಾರಣದಿಂದ ಅಧಿಕಾರಿಗಳು ಮಹಾಪುರುಷಾರ್ಥವನ್ನು ಹೊಂದುತ್ತಾರೆಂತಲೂ, ಸತ್ಸಾಧನೆಗೆ ಅನುಕೂಲವಾದ ಭಗವದ್ಭಕ್ತರ ಮಹಿಮಾ ತಿಳಿಯುವ ವಿಚಾರವನ್ನೂ, ಪುಣ್ಯಪಾಪಗಳನ್ನು ತಿಳಿಯುವ ವಿಚಾರವನ್ನೂ, ಪಂಚಭೂತಗಳಿಂದ ನಿರ್ಮಿತವಾದ ಜೀವರ ಭೋಜನೋಪಯೋಗವಾದ ಪದಾರ್ಥಗಳಲ್ಲಿ ಮಾಡಬೇಕಾದ ಅನುಸಂಧಾನಪ್ರಕಾರವನ್ನೂ, ಶ್ರೀಪರಮಾತ್ಮನ ವ್ಯಾಪ್ತಿಪ್ರಕಾರವನ್ನೂ ಹೇಳುತ್ತಾರೆ.

ಶ್ರೀಸೀತಾಪತಯೇ ನಮಃ ॥

ರಾಗ ಭೈರವಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಮಕ್ಕಳಾಡಿಸುವಾಗ ಮಡದಿಯೊ । ಳಕ್ಕರದಿ ನಗುವಾಗ ಹಯ ಪ- । ಲ್ಲಕ್ಕಿ ಗಜ ಮೊದಲಾದ ವಾಹನವೇರಿ ಮೆರೆವಾಗ ॥ ಬಿಕ್ಕುವಾಗಾ ಕಳಿಸುತಲಿ ದೇ- । ವಕ್ಕಿತನಯನ ಸ್ಮರಿಸುತಿಹ ನರ । ಸಿಕ್ಕನೆಮದೂತರಿಗೆ ಆವಾವಲ್ಲಿ ನೋಡಿದರು ॥ ೧ ॥

ಸರಿತು ಪ್ರವಹಗಳಲ್ಲಿ ದಿವ್ಯಾಂ- । ಬರದಿ ಪುತ್ರಾದಿಯಲಿ ಹರ್ಷಾ- । ಮರ್ಷ ವಿಸ್ಮೃತಿಯಿಂದಲಾಗಲಿ ವೊಮ್ಮೆ ಬಾಯ್ದೆರೆದು । ಹರಿಹರೀಹರಿಯೆಂಬ ಯೆರಡ- । ಕ್ಷರ ನುಡಿದ ಮಾತ್ರದಲಿ ದುರಿತಗ- । ಳಿರದೆ ಪೋಪವು ತೂಲರಾಶಿಯೊಳನಲ ಪೊಕ್ಕಂತೆ ॥ ೨ ॥

ಮಲಗುವಾಗಲು ಯೇಳುವಾಗಲು । ಕುಳಿತು ಮಾತಾಡುತಲಿ ಮನೆಯೊಳು । ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ॥ ಕಲುಷದೂರನ ಸಕಲ ಠಾವಿಲಿ । ತಿಳಿಯೆ ತತ್ತನ್ನಾಮರೂಪವ । ಬಳಿಯಲಿಪ್ಪನು ಒಂದರೆಕ್ಷಣ ಬಿಟ್ಟಗಲನವರ ॥ ೩ ॥

ಆವ ಕುಲದವನಾದಡೇನಿ- । ನ್ನಾವ ದೇಶದೊಳಿದ್ದಡೇನಿ- । ನ್ನಾವಕರ್ಮವ ಮಾಡಲೇನಿನ್ನಾವ ಕಾಲದಲೀ ॥ ಶ್ರೀವರನ ಸರ್ವತ್ರ ವಲಿ ಸಂ- । ಭಾವಿಸುತ ಪೂಜಿಸುತ ಮೋದಿಸ । ಕೋವಿದರಿಗುಂಟೇನೊ ಭಯದುಃಖಾದಿ ದೋಷಗಳು ॥ ೪ ॥

ವಾಸುದೇವನ ಗುಣಸಮುದ್ರದೊ- । ಳೀಸಬಲ್ಲವ ಭವಸಮುದ್ರಾ- । ಯಾಸವಿಲ್ಲದೆ ದಾಂಟುವನು ಶೀಘ್ರದಲಿ ಜಗದೊಳಗೆ ॥ ಜೇಸರದೆ ದುರ್ವಿಷಯಗಳನಭಿ- । ಲಾಷೆಯಲಿ ಬಳಲುವವ ನಾನಾ । ಕ್ಲೇಶಗಳ ನನುಭವಿಪ ಭಕ್ತಿಸುಮಾರ್ಗ ಕಾಣದಲೆ ॥ ೫ ॥

ಸ್ನಾನಜಪದೇವಾರ್ಚನೆಯು ವ್ಯಾ- । ಖ್ಯಾನ ಭಾರತಮುಖವು ಹೋಸಪು- । ರಾಣಕಥೆಗಳ ಪೇಳಿ ಕೇಳಿದರೇನು ದಿನದಿನದಿ ॥ ಜ್ಞಾನಕ ರ್ಮೇಂದ್ರಿಯಗಳಿಂದೇ- । ನೇನು ಮಾಡುವ ಕರ್ಮಗಳು ಲ- । ಕ್ಷ್ಮೀನಿ ವಾಸನ ಪೂಜೆಯೆಂದರ್ಪಿಸದ ಮಾನವನು ॥ ೬ ॥

ದೇವಗಂಗೆಯೊಳುಳ್ಳವಗೆ ದುರಿ- । ತಾವಳಿಗಳುಂಟೇ ವಿಚಾರಿಸೆ । ಪಾವುಗಳ ಭಯವುಂಟೆ ವಿಹಗಾಧಿಪನ ಮಂದಿರದೀ ॥ ಜೀವಕರ್ತೃತ್ವ ವನು ಮರೆದು ಪ- । ರಾವರೇಶನೆ ಕರ್ತೃಯೆಂದರಿ- । ದಾವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು ॥ ೭ ॥

ಏನು ಮಾಡುವ ಪಾಪಪುಣ್ಯಗ- । ಳಾನೆ ಮಾಡುವೆನೆಂಬವಧ ಮನು । ಹೀನಕರ್ಮಕೆ ಪಾತ್ರ ನಾ ಪುಣ್ಯಕ್ಕೆ ಹರಿಯೆಂಬಾ ॥ ಮಾನವನು ಮಧ್ಯಮನು ದ್ವಂದ್ವಕೆ । ಶ್ರೀನಿವಾಸನೆ ಕರ್ತನೆಂದು ಸ- । ದಾನುರಾ ಗದಿ ನೆನೆದು ಸುಖಿಸುವನೇ ನರೋತ್ತಮನೂ ॥ ೮ ॥

ಈ ವುಪಾಸನೆಗೈವರಿಳೆಯೊಳು । ದೇವತೆಗಳಲ್ಲದಲೆ ನರರ- । ಲ್ಲಾವ ಬಗೆಯಿಂದಾದರಿವರರ್ಚನೆಯು ಹರಿಪೂಜೆ ॥ ಕೇವಲ ಪ್ರತಿಮೆಗಳೆನಿಪರು ರ- । ಮಾವಿನೋದಿಗೆ ಇವರನುಗ್ರಹ । ದೇವರನುಗ್ರಹವೆನಿಸುವದು ಸನ್ಮುಕ್ತಿಯೋಗ್ಯರಿಗೇ ॥ ೯ ॥

ತನುವೆ ನಾನೆಂಬುವನು ಸತಿಸುತ । ಮನೆಧನಾದಿಗಳೆನ್ನದೆಂಬುವ । ದ್ಯುನದಿ ಮೊದಲಾದುದಕಗಳೆ ಸತ್ತೀರ್ಥವೆಂಬುವನು ॥ ಅನಲ ಲೋಹಾದಿ ಪ್ರತೀಕಾ- । ರ್ಚನವೆ ದೇವರಪೂಜೆ ಸುಜನರೆ । ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ ॥ ೧೦ ॥

ಅನಲ ಸೋಮಾರ್ಕೇಂದು ತಾರಾ- । ವನಿ ಸುರಾಪಗಮುಖ್ಯತೀರ್ಥಗ- । ಳನಿಲ ಗಗನ ಮನಾದಿ ಇಂದ್ರಿಯಗಳಿಗೆ ಅಭಿಮಾನೀ ॥ ಎನಿಪ ಸುರರು ವಿಪಶ್ಚಿತರು ಸ- । ನ್ಮನದಿ ಭಜಿಸದಲಿಪ್ಪವರ ಪಾ- । ವನವ ಮಾಡರು ತಮ್ಮ ಪೂಜೆಯ ಮಾಡಿದರು ಸರಿಯೆ ॥ ೧೧ ॥

ಕೆಂಡ ಕಾಣದೆ ಮುಟ್ಟಿದರು ಸರಿ । ಕಂಡು ಮುಟ್ಟಲು ದಹಿಸದಿಪ್ಪುದೆ । ಪುಂಡರೀಕದಳಾಯತಾಕ್ಷನ ವಿಮಲಪದಪದ್ಮ ॥ ಬಂಡುಣಿಗಳೆಂದೆನಿಪ ಭಕುತರ । ಹಿಂಡು ನೋಡಿದ ಮಾತ್ರದಲಿ ತನು । ದಿಂಡುಕೆಡಹಿದ ನರನ ಪಾವನಮಾಳ್ಪರಾಕ್ಷಣದಿ ॥ ೧೨ ॥

ಈ ನಿಮಿತ್ತ ಪುನಃಪುನಃ ಸು- । ಜ್ಞಾನಿಗಳ ಸಹವಾಸ ಮಾಡುಕು- । ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗೀ ॥ ವೈನತೇಯಾಂಸಗನ ಸರ್ವ । ಸ್ಥಾನದಲಿ ತನ್ನಾಮರೂಪವ । ಧ್ಯಾನಿಸುತ ಸಂಚರಿಸು ಇತರಾಲೋಚನೆಯ ಬಿಟ್ಟು ॥ ೧೩ ॥

ಈ ನಳಿನಜಾಂಡದೊಳು ಸರ್ವ । ಪ್ರಾಣಿಗಳೊಳಿದ್ದನವರತ ವಿ- । ಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ ॥ ಏನು ಕಾಣದೆ ಸಕಲ ಕರ್ಮಗ- । ಳಾನೆ ಮಾಡುವೆನೆಂಬ ನರನು ಕು- । ಯೋನಿಯೈದುವ ಕರ್ತೃ ಹರಿಯೆಂದವನೆ ಮುಕ್ತನಹ ॥ ೧೪ ॥

ಕಲಿಮಲಾಪಗಳೆನಿಸುತಿಹ ಬಾಂ- । ಬೊಳೆಯೊಳಗೆ ಸಂಚರಿಸಿ ಬದುಕುವ । ಜಲಚರಪ್ರಾಣಿಗಳು ಬಲ್ಲವೆ ತೀರ್ಥಮಹಿಮೆಯನು ॥ ಹಲವುಬಗೆಯಲಿ ಹರಿಯ ಕರುಣಾ । ಬಲದಿ ಬಲ್ಲಿದರಾದ ಬ್ರಹ್ಮಾ- । ನಿಳವಿಪೇಶಾದ್ಯಮರರರಿಯರನಂತನಮಲಗುಣಾ ॥ ೧೫ ॥

ಶ್ರೀಲಕುಮಿವಲ್ಲಭನು ಹೃತ್ಕೀ- । ಲಾಲಜದೊಳಿದ್ದಖಿಳಚೇತನ । ಜಾಲವನು ಮೋಹಿಸುವ ತ್ರಿಗುಣದಿ ಬದ್ಧರನು ಮಾಡಿ ॥ ಸ್ಥೂಲಕರ್ಮದಿ ರತರ ಮಾಡಿ ಸು- । ಲೀಲೆಗಳ ತಿಳಿಸದಲೆ ಭವದಿ ಕು- । ಲಾಲಚಕ್ರದ ತೆರದಿ ತಿರುಗಿಸುತಿಹನು ಮಾನವರ ॥ ೧೬ ॥

ವೇದಶಾಸ್ತ್ರ ವಿಚಾರಗೈದು ನಿ- । ಷೇಧಕರ್ಮವ ತೊರೆದು ನಿತ್ಯದಿ । ಸಾಧುಕರ್ಮವ ಮಾಳ್ಪರಿಗೆ ಸ್ವರ್ಗಾದಿ ಸುಖವೀವಾ ॥ ಐದಿಸುವ ಪಾಪಿಗಳ ನಿರಯುವ । ಖೇದವೋದ ಮನುಷ್ಯರಿಗೆ ದಃ- । ರ್ವಾದಿಗಳಿಗಂಧಂತಮದಿ ಮಹದುಃಖಗಳನುಣಿಪ ॥ ೧೭ ॥

ನಿರ್ಗುಣೋಪಾಸಕಗೆ ಗುಣಸಂ- । ಸರ್ಗದೋಷಗಳೀಯದಲೆ ಆಪ- । ವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ ॥ ದುರ್ಗಮನು ಯೆಂದೆನಿಪ ತ್ರೈವಿ- । ದ್ಯರ್ಗೆ ತ್ರಿಗುಣಾತೀತ ಸಂತತ । ಸ್ವರ್ಗಭೂನರಕದಲಿ ಸಂಚಾರವನೆ ಮಾಡಿಸುವಾ ॥ ೧೮ ॥

ಮೂವರೊಳಗಿದ್ದರು ಸರಿಯೆ ಸುಖ । ನೋವುಗಳು ಸಂಬಂಧವಾಗವು । ಪಾವನಕೆ ಪಾವನ ಪರಾತ್ಪರ ಪೂರ್ಣ ಸುಖವನಧೀ ॥ ಈ ವನರುಹಭವಾಂಡದೊಳುಸ್ವಕ- । ಳೇವರತದಾಕಾರ ಮಾಡಿ ಪ- । ರಾವರೇಶಚರಾಚರಾತ್ಮಕ ಲೋಕಗಳ ಪೊರೆವಾ ॥ ೧೯ ॥

ಈ ನಿಮಿತ್ತ ನಿರಂತರ ಸ್ವಾ- । ಧೀನಕರ್ತೃತ್ವವನು ಮರದೇ- । ನೇನು ಮಾಡುವದೆಲ್ಲ ಹರಿ ಒಳಹೊರಗೆ ನೆಲಸಿದ್ದು ॥ ತಾನೆ ಮಾಡುವನೆಂದರಿದು ಮ- । ದ್ದಾನೆಯಂದದಿ ಸಂಚರಿಸು ಪವ- । ಮಾನವಂದಿತ ವಂದರೆಕ್ಷಣ ಬಿಟ್ಟಗಲ ನಿನ್ನಾ ॥ ೨೦ ॥

ಹಲವು ಕರ್ಮವ ಮಾಡಿ ದೇಹವ । ಬಳಲಿಸದೆ ದಿನದಿನದಿ ಹೃದಯಾ- । ಮಲಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸೂ ॥ ತಿಳಿಯದೀ ಪೂಜಾಪ್ರಕರಣವ । ಫಲಸುಪುಷ್ಪಾಗ್ರ್ಯೋದಕ ಶ್ರೀ- । ತುಲಸಿದಳವರ್ಪಿಸಲು ಒಪ್ಪನು ವಾಸುದೇವ ಸದಾ ॥ ೨೧ ॥

ಧರಣಿನಾರಾಯಣನು ಉದಕದಿ । ತುರಿಯನಾಮಕನಗ್ನಿಯೊಳು ಸಂ- । ಕರುಷಣಾಹ್ವಯ ವಾಯುಗಪ್ರದ್ಯುಮ್ನನನಿರುದ್ಧ ॥ ಇರುತಿಹನು ಆಕಾಶದೊಳು ಮೂ- । ರೆರಡುರೂಪವ ಧರಿಸಿ ಭೂತಗ । ಕರೆಸುವನು ತನ್ನಾಮರೂಪದಿ ಪ್ರಜರ ಸಂತೈಪ ॥ ೨೨ ॥

ಘನಗತನು ತಾನಾಗಿ ನಾರಾ- । ಯಣನು ತನ್ನಾಮದಲಿ ಕರೆಸುವ । ವನಪ ಗರ್ಭೋದಕದಿ ನೆಲಸಿಹ ವಾಸುದೇವಾಖ್ಯ ॥ ಧ್ವನಿಸಿಡಿಲು ಸಂಕರುಷಣನು ಮಿಂ- । ಚಿನೊಳು ಶ್ರೀಪ್ರದ್ಯುಮ್ನ ವೃಷ್ಟಿಯ । ಹನಿಗಳೊಳಗನಿರುದ್ಧನಿಪ್ಪನು ವರುಷನೆಂದೆನಿಸೀ ॥ ೨೩ ॥

ಗೃಹಕುಟುಂಬ ಧನಾದಿಗಳ ಸ- । ನ್ನಹಗಳುಳ್ಳವರಾಗಿ ವಿಹಿತಾ- । ವಿಹಿತ ಧರ್ಮಸುಕರ್ಮಗಳ ತಿಳಿಯದಲೆ ನಿತ್ಯದಲಿ ॥ ಅಹರವೈಧುನ ನಿದ್ರೆಗೊಳಗಾ- । ಗಿಹರು ಸರ್ವಪ್ರಾಣಿಗಳು ಕೃ- । ದ್ಗೃಹನಿವಾಸಿಯನರಿಯದಲೆ ಭವದೊಳಗೆ ಬಳಲುವರು ॥ ೨೪ ॥

ಜಡಜಸಂಭವ ಖಗ ಫಣಿಪ ಕಂ- । ಜಡೆಯರಿಂದೊಡಗೂಡಿ ರಾಜಿಸು- । ತಡವಿಯೊಳಗಿಪ್ಪನು ಸದಾ ಗೋಜಾದ್ರಿಜನು ಯೆನಿಸಿ ॥ ಉಡುಪನಿಂದಭಿವೃದ್ಧಿಗಳ ತಾ । ಕೊಡುತ ಪಕ್ಷಿಮೃಗಾಹಿಗಳ ಕಾ- । ರೊಡಲ ಕಾವನು ತತ್ತದಾಹ್ವಯನಾಗಿ ಜೀವರನು ॥ ೨೫ ॥

ಅಪರಿಮಿತ ಸನ್ಮಹಿಮ ನರಹರಿ । ವಿಪಿನದೊಳು ಸಂತೈಸುವನು ಕಾ- । ಶ್ಯಪಿಯನಳೆದವ ಸ್ಥಳಗಳಲಿ ಸರ್ವತ್ರ ಕೇಶವನೂ ॥ ಖಪತಿ ಗಗನದಿ ಜಲಗಳಲಿ ಮಹ । ಶಫರನಾಮಕ ಭಕ್ತರನು ನಿ- । ಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ ॥ ೨೬ ॥

ಕಾರಣಾಂತರ್ಯಾಮಿ ಸ್ಥೂಲವ- । ತಾರ ವ್ಯಾಪ್ತಾಂಶಾದಿರೂಪಕೆ । ಸಾರಶುಭಪ್ರವಿವಿಕ್ತನಂದ ಸ್ಥೂಲಸಿಸ್ನಾರಾ ॥ ಆರು ರಸಗಳನರ್ಪಿಸಲ್ಪರಿ- । ಗೀ ರಹಸ್ಯವ ಪೇಳದೆ ಸದಾ- । ಪಾರಮಹಿಮನ ರೂಪಗುಣಗಳ ನೆನೆದು ಸುಖಿಸುತಿರೂ ॥ ೨೭ ॥

ಜಲಗತುಡುಪನ ವಿಮಲಬಿಂಬವ । ಮೆಲುವೆವೆಂಬತಿಹರುಷದಿಂ ದಲಿ । ಜಲಚರ ಪ್ರಾಣಿಗಳು ನಿತ್ಯದಿ ಯತ್ನಗೈವಂತೆ ॥ ಹಲಧರಾನುಜ ಭೋಗ್ಯರಸಗಳ । ನೆಲೆಯುನರಿಯದೆ ಪೂಜಿಸುತ ಹಂ- । ಬಲಿಸುವರು ಪುರುಷಾರ್ಥಗಳ ಸತ್ಫಲಜರಾವೆಂದೂ ॥ ೨೮ ॥

ದೇವಋಷಿಗಂಧರ್ವ ಪಿತೃ ನರ- । ದೇವ ಮಾನವದನುಜಗೋ ಜಖ- । ರಾವಿ ಮೊದಲಾದಖಿಳ ಚೇತನ ಭೋಗ್ಯರಸಗಳನೂ ॥ ಯಾವ ದವಯುವಗಳೊಳಗಿದ್ದು ರ- । ಮಾವರನು ಸ್ವೀಕರಿಪ ಯಾವ- । ಜ್ಜೀವಗ ಣಕೆ ಸ್ವಯೋಗ್ಯರಸಗಳನೀವನೆಂದೆಂದೂ ॥ ೨೯ ॥

ಒರಟುಬುದ್ಧಿಯ ಬಿಟ್ಟು ಲೌಕಿಕ । ಹರಟೆಗಳ ನೀಡಾಡಿ ಕಾಂ ಚನ । ಪರಟೆಲೋಷ್ಟಾದಿಗಳು ಸಮವೆಂದರಿತು ನಿತ್ಯದಲಿ ॥ ಪುರುಟಗ ರ್ಭಾಂಡೋದರನು ಸ- । ತ್ಪುರುಟನೆಂದೆನಿಸೆಲ್ಲರೊಳಗಿ- । ದ್ದುರುಟುಕ ರ್ಮವ ಮಾಳ್ಪನೆಂದಡಿಗಡಿಗೆ ನೆನವುತಿರೂ ॥ ೩೦ ॥

ಭೂತಳದಿ ಜನರುಗಳು ಮರ್ಮದ । ಮಾತುಗಳನಾಡಿದರೆ ಸಹಿ ಸದೆ । ಘಾತಿಸುವರತಿಕೋಪದಿಂದಲಿ ಯೆಚ್ಚರಿಪ ತೆರದಿ ॥ ಮಾತುಳಾಂ ತಕ ಜಾರ ಹೇ ನವ- । ನೀತಚೋರನೆ ಯೆನಲು ತನ್ನ ನಿ- । ಕೇತನ ದೊಳಿಟ್ಟವರ ಸಂತೈಸುವನು ಕರುಣಾಳೂ ॥ ೩೧ ॥

ಹರಿಕಥಾಮೃತಸಾರವಿದು ಸಂ- । ತರು ಸದಾ ಚಿತ್ತೈಸುವದು ನಿ-। ಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಲೆ ॥ ನಿರುತ ಸದ್ಭಕ್ತಿ ಯುಲಿ ಭಗವ- । ಚ್ಚರಿತೆಗಳ ಕೊಂಡಾಡಿ ಹಿಗ್ಗುವ । ಪರಮಭಗವದ್ದಾಸ ರಿಗೆ ತಿಳಿಸುವದು ಈ ರಹಸ್ಯ ॥ ೩೨ ॥

ಸತ್ಯಸಂಕಲ್ಪನು ಸದಾ ಏ- । ನಿತ್ತದೇಪುರುಷಾರ್ಥವೆಂದರಿ- । ದ ತ್ಯಧಿಕ ಸಂತೋಷದಿಂ ನೆನವುತ್ತ ಭುಂಜಿಪುದು ॥ ನಿತ್ಯಸುಖಸಂಪೂರ್ಣ ಪರಮಸು- । ಹೃತ್ತಮ ಜಗನ್ನಾಥವಿಟ್ಠಲ । ಬತ್ತಿಸಿ ಭವಾಂಬುಧಿಯ ಚಿತ್ಸುಖವ್ಯಕ್ತಿ ಕೊಡುತಿಪ್ಪಾ ॥ ೩೩ ॥

ಅಂತು ಸಂಧಿ ೧೩ಕ್ಕೆ ಪದ ೪೧೨ಕ್ಕೆ ನಾಮಸ್ಮರಣಸಂಧಿ ಸಮಾಪ್ತ.

# ೧೪. ಪಿತೃಗಣವಿಚಾರಸಂಧಿ.

## (ಸರ್ವಜೀವನಕಲ್ಪಸಂಧಿ.)

ಈ ಸಂಧಿಯಲ್ಲಿ ತಮ್ಮ ಪಿತ್ರಂತರ್ಗತ ಭಗವದುಪಾಸನಾ ವಿಚಾರವಾದ ಸಾಂವತ್ಸರಿಕ ಶ್ರಾದ್ಧಾದಿ ಪಿತೃಯಜ್ಞವನ್ನು ಅನುಸಂಧಾನಪೂರ್ವಕ ಮಾಡ ಬೇಕಾದುದರಿಂದ ಆ ವಿಚಾರವನ್ನೂ ಹಾಗೆಯೇ ಸಪ್ತಾನ್ನಪ್ರಕರಣ, ಅಂಶಾಂ ಶವಿಚಾರ, ಜೀವರ ಸೃಜ್ಯಾಸೃಜ್ಯವಿಚಾರ, ಪಂಚಭೇಧಲಕ್ಷಣ ಮೊದಲಾದ ವಿಷಯಗಳನ್ನೂ ಹೇಳುತ್ತಾರೆ.

---

॥ ಶ್ರೀಪಾಂಡುರಂಗವಿಠಲಾಯ ನಮಃ ॥

ರಾಗ ಮುಖಾರಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಕೃತಿರಮಣ ಪ್ರದ್ಯುಮ್ನ ವಸುದೇ- । ವತೆಗಳಾಹಂಕಾರತ್ರಯದೊಳು । ಚತುರವಿಂಶತಿರೂಪದಿಂದಲಿ ಭೋಜ್ಯನೆನಿಸುವನೂ ॥ ಹುತವಹಾಕ್ಷಾಂತ ರ್ಗತ ಜಯಾ- । ಪತಿಯು ತಾನೇ ಮೂರಧಿಕ ತ್ರಿಂ- । ಶತಿಸುರೂಪದಿ ಭೋಕ್ತೃವೆನಿಸುವ ಭೋಕ್ತೃಗಳೊಳಿದ್ದೂ ॥ ೧ ॥

ಆರಧಿಕಮೂವತ್ತುರೂಪದಿ । ವಾರಿಜಾಪ್ತನೊಳಿರುತಿಹನು ಮಾ- । ಯಾರಮಣ ಶ್ರೀವಾಸುದೇವನು ಕಾಲನಾಮದಲಿ ॥ ಮೂರುವಿಧ ಪಿತೃ ಗಳೊಳು ವಸುತ್ರಿಪು- । ರಾರಿಯಾದಿತ್ಯಗನಿರುದ್ಧನು । ತೋರಿಕೊಳ್ಳದೆ ಕರ್ತೃಕರ್ಮಕ್ರಿಯನೆನಿಸಿಕೊಂಬಾ ॥ ೨ ॥

ಸ್ವವಶನಾರಾಯಣನು ತಾ ಷ- । ಣ್ಣವತಿನಾಮದಿ ಕರೆಸುತಲಿ ವಸು । ಶಿವದಿವಾಕರ ಕರ್ತೃಕರ್ಮಕ್ರಿಯೆಗಳೊಳಗಿದ್ದೂ ॥ ನೆವನವಿಲ್ಲದೆ ನಿತ್ಯದಲಿ ತ- । ನ್ನವರು ಮಾಡುವ ಸೇವೆಕೈಕೊಂ- । ಡವರ ಪಿತೃಗಳಿ ಗೀವನಂತಾನಂತಸುಖಗಳನೂ ॥ ೩ ॥

ತಂತುಪಟದಂದದಲಿ ಲಕ್ಷ್ಮೀ- । ಕಾಂತ ಪಂಚಾತ್ಮಕನೆನಿಸು ವನು । ಕಂತುಹರ ರವಿಕರ್ತೃಗಳೊಳಿದ್ದನವರತ ತನ್ನಾ । ಚಿಂತಿಸುವ ಸಂತರನು ಗುರುವು- । ಧ್ವಾಂತರಾತ್ಮಕ ಸಂತಯಿಸುವನು । ಸಂತತಪಿ ಶಾರ್ಥಗಳ ಪಾಲಿಸಿ ಇಹಪರಂಗಳಲಿ ॥ ೪ ॥

ತಂದೆತಾಯ್ಗಳ ಪ್ರೀತಿಗೋಸುಗ । ನಿಂದ್ಯಕರ್ಮವ ತೊರೆದು ವಿಹಿ ತಗ- । ಳೊಂದು ಮಿರದೆ ಸಾಂಗಕರ್ಮಗಳಾಚರಿಸುವವರೂ ॥ ವಂದ ನಿಯರಾಗಿಳೆಯೊಳಗೆ ದೈ- । ನಂದಿನದಿ ದೈಹಿಕ ದಹಿಕ ಸುಖ- । ದಿಂದ ಬಾಳ್ವರು ಬಹು ದಿವಸದಲಿ ಕೀರ್ತಿಯುತರಾಗಿ ॥ ೫ ॥

ಅಂಶಿಯಂಶಾಂತರ್ಗತತ್ರಯ । ಹಂಸವಾಹನ ಮುಖ್ಯದಿವಿಜರ । ಸಂಶಯದಿ ತಿಳಿದಂತರಾತ್ಮಕ ಶ್ರೀಜನಾರ್ದನನಾ ॥ ಸಂಸ್ಮರಣಪೂರ್ವಕದಿ ಷಡಧಿಕ । ತ್ರಿಂಶತಿತ್ರಯರೂಪವರಿತು ವಿ- । ಪಾಂಸಗನ ಪೂಜಿಸುವರ ವರೆ ಕೃತಾರ್ಥರೆನಿಸುವರೂ ॥ ೬ ॥

ಮೂರುವರೆಸಾವಿರದ ಮೇಲರೆ । ನೂರರೈರೂಪದಿ ಜನಾರ್ದನ । ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳೂ ॥ ಬಾರದಂತೆ ಬಹು ಪ್ರಕಾರ ಖ- । ರಾರಿ ಕಾಪಾಡುವನು ಸರ್ವಶ- । ರೀರಗಳೊಳಿದ್ದವರವರ ಪೆಸರಿಂದೆ ಕರೆಸುತಲಿ ॥ ೭ ॥

ಜಯ ಜಯ ಜಯಾಕಾಂತ ದತ್ತಾ- । ತ್ರೇಯ ಕಪಿಲ ಮಹಿದಾಸ ಭಕ್ತ- । ಪ್ರಿಯ ಪುರಾತನ ಪುರುಷ ಪೂರ್ಣಾನಂದಜ್ಞಾನಘನ ॥ ಹಯ ವದನ ಹರಿ ಹಂಸ ಲೋಕ । ತ್ರಯವಿಲಕ್ಷಣ ನಿಖಿಳಜಗದಾ- । ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದೂ ॥ ೮ ॥

ಷಣ್ಣವತಿಯೆಂಬಕ್ಷರೇಡ್ಯನು । ಷಣ್ಣವತಿನಾಮದಲಿ ಕರೆಸುತ । ತನ್ನವರ ಸದ್ಭಕ್ತಿಪೂರ್ವಕದಿಂದ ಮಾಡುತಿಹಾ ॥ ಪುಣ್ಯಕರ್ಮವ ಸ್ವೀಕ ರಿಸಿ ಕಾ- । ರುಣ್ಯಸಾಗರ ಸಲಹುವನು ಬ್ರ- । ಹ್ಮಣ್ಯದೇವ ಭವಾಬ್ಧಿ ಪೋತ ಬಹು ಪ್ರಕಾರದಲಿ ॥ ೯ ॥

ದೇಹಗಳ ಕೊಡುವವನು ಅವರವ- । ರಹರವನು ಕೊಡದಿಹನೆ ಸುಮನಸ । ಮಹಿತ ಮಂಗಳಚರಿತ ಸದ್ಗುಣಭರಿತನನವರತಾ ॥ ಐಹಿಕ ಪಾರತ್ರಿಕಸುಖಪ್ರದ । ವಹಿಸಿ ಬೆನ್ನಿಲಿ ಬಿಟ್ಟವಮೃತವ । ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನು ॥ ೧೦ ॥

ದ್ರುಹಿಣ ಮೊದಲಾದಮರರಿಗೆ ಸ- । ನ್ನುಹಿಮ ಮಾಯಾರಮಣ ತಾನೇ । ಸ್ವಹನೆನಿಸಿ ಸಂತೃಪ್ತಿಬಡಿಸುವ ಸರ್ವಕಾಲದಲಿ ॥ ಪ್ರಹಿತ ಸಂಕರ್ಷಣನು ಪಿತೃಗಳಿ- । ಗಹರನೆನಿಪ ಸ್ವಧಾಖ್ಯರೂಪದಿ । ಮಹಿಜ ಫಲತೃಣ ಪೆಸರಿನಲಿ ಪ್ರದ್ಯುಮ್ನನನಿರುದ್ಧಾ ॥ ೧೧ ॥

ಅನ್ನನೆನಿಸುವ ನೃಪಶುಗಳಿಗೆ ಹಿ- । ರಣ್ಯಗರ್ಭಾಂಡದೊಳು ಸಂತತ । ತನ್ನನೀಪರಿಯಿಂದುಪಾಸನೆಗೈವ ಭಕತರನು ॥ ಬನ್ನಬಡಿಸದೆ ಭವಸಮುದ್ರ ಮ- । ಹೋನ್ನತಿಯ ದಾಂಟಿಸಿ ಚತುರ್ವಿಧ- । ವನ್ನಮಯನಾತ್ಮಪ್ರದರ್ಶನ ಸುಖವನೀವ ಸದಾ ॥ ೧೨ ॥

ಮನವಚನಕಾಯಗಳ ವೆಶೆಯಿಂ- । ದನುದಿನದಿ ಬಿಡದಾಚರಿಸುತಿ- । ಪ್ಪನುಚಿತೋಚಿತಕರ್ಮಗಳ ಸದ್ಭಕ್ತಿಪೂರ್ವಕದಿ । ಅನಿಲದೇವನೊಳಿಪ್ಪ ನಾರಾ- । ಯಣಗಿದನ್ನವುಯೆಂದು ಕೃಷ್ಣಾ- । ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೈಪ ಕರುಣಾಳು ॥ ೧೩ ॥

ಏಳುವಿಧವನ್ನಪ್ರಕರಣವ । ಕೇಳಿ ಕೋವಿದರಾಸ್ಯದಿಂದಲಿ । ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳಾ ॥ ಕಾಲಕಾಲದಿ ನೆನೆದು ಪೂಜಿಸು । ಸ್ಥೂಲಮತಿಗಳಿಗಿದನು ಪೇಳದೆ । ಶ್ರೀಲಕುಮಿವಲ್ಲಭನೆ ಅನ್ನಾದನ್ನನನ್ನದನು ॥ ೧೪ ॥

ಎಂದರಿತು ಸಪ್ತಾನ್ನಗಳ ದೈ- । ನಂದಿನದಿ ಮರೆಯದೆ ಸದಾ ಗೋ- । ವಿಂದಗರ್ಪಿಸು ನಿರ್ಭಯದಿ ಮಹಯಜ್ಞವಿದುವೆಂದೂ ॥ ಇಂದಿರೇಶನು ಸ್ವೀಕರಿಸಿ ದಯ- । ದಿಂದೆ ಬೇಡಿಸಿಕೊಳದೆ ತವಕದಿ । ತಂದು ಕೊಡುವನು ಪರಮಮಂಗಳ ತನ್ನ ದಾಸರಿಗೆ ॥ ೧೫ ॥

ಸೂಜಿ ಕರದಲಿ ಪಿಡಿದು ಸಮರವ । ನಾ ಜಯಿಸುವೆನು ಎಂಬ ನರನಂ- । ತೀಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ ॥ ಶ್ರೀಜಗತ್ಪತಿ ಚರಣಯುಗಳಸ- । ರೋಜ ಭಕ್ತಿಜ್ಞಾನಪೂರ್ವಕ । ಪೂಜಿಸದೆ ಧರ್ಮಾರ್ಥಕಾಮವ ಬಯಸಿ ಬಳಲುವರೂ ॥ ೧೬ ॥

ಶಕಟಭಂಜನ ಸಕಲ ಜೀವರ । ನಿಕಟಗನು ತಾನಾಗಿ ಲೋಕಕೆ । ಪ್ರಕಟನಾಗದೆ ಸಕಲ ಕರ್ಮವ ಮಾಡಿ ಮಾಡಿಸುತಾ ॥ ಅಕುಟಿಲಾತ್ಮಕ ಭಕತಜನರಿಗೆ । ಸುಖದನೆನಿಸುವ ಸರ್ವಕಾಲದ- । ಲಕಟಕಟ ಈತನ ಮಹಾಮಹಿಮೆಗಳಿಗೇನೆಂಬೆ ॥ ೧೭ ॥

ಶ್ರೀಲಕುಮಿವಲ್ಲಭನು ವೈಕುಂ- । ಠಾಲಯದಿ ಪ್ರಣವ ಪ್ರಕೃತಿ ಕೀ- । ಲಾಲಜಾಸನಮುಖ್ಯಚೇತನರೊಳಗೆ ನೆಲಸಿದ್ದು ॥ ಮೂಲಕಾರಣ ನಂಶನಾಮದಿ । ಲೀಲೆಗೈಸುತ ತೋರಿಕೊಳ್ಳದೆ । ಪಾಲಿನೊಳು ಘೃತ ವಿದ್ದ ತೆರದಂತಿಪ್ಪ ತ್ರಿಸ್ಥಳದಿ ॥ ೧೮ ॥

ಮೂರು ಯುಗದಲಿ ಮೂಲರೂಪನು । ಸೂರಿಗಳ ಸಂತೈಸಿ ದಿತಿಯ ಕು- । ಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು ॥ ಕಾರುಣಿಕ ಭೂಮಿಯೊಳು ನಿಜ ಪರಿ- । ವಾರಸಹಿತವತರಿಸಿ ಬಹುವಿಧ । ತೋರಿದನು ನರವತ್ಪ್ರವೃತ್ತಿಯ ಸಕಲ ಚೇತನಕೇ ॥ ೧೯ ॥

ಕಾರಣಾಹ್ವಯ ಪ್ರಕೃತಿಯೊಳಗಿ- । ದ್ದಾರಧಿಕ ಹದಿನೆಂಟು ತತ್ವವ । ತಾ ರಚಿಸಿ ತದ್ರೂಪ ತನ್ನಾಮಂಗಳನೆ ಧರಿಸೀ ॥ ನೀರಜಭವಾಂಡವನು ನಿರ್ಮಿಸಿ । ಕಾರುಣಿಕ ಕಾರ್ಯಾಖ್ಯರೂಪದಿ । ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದೀ ॥ ೨೦ ॥

ಜೀವರಂತರ್ಯಾಮಿ ಅಂಶಿಕ- । ಳೇವರಗಳೊಳಗಿಂದ್ರಿಯಗಳಲಿ । ತಾ ವಿಹಾರವ ಗೈವುತನುದಿನವಂಶನಾಮದಲಿ ॥ ಈ ವಿಷಯಗಳನುಂಡು ಸುಖಮಯ- । ನೀವ ಸುಖ ಸಂಸಾರದುಃಖವ । ದೇವ ದಾನವ ಮಾನವರಿಗವಿರತ ಸುದಾಮಸಖಾ ॥ ೨೧ ॥

ದೇಶದೇಶವ ಸುತ್ತಿ ದೇಹಾ- । ಯಾಸಗೊಳಿಸದೆ ಕಾಮ್ಯ ಕರ್ಮ ದು- । ರಾಶಿಗೊಳಗಾಗದಲೆ ಬ್ರಹ್ಮಾದ್ಯಖಿಳ ಚೇತನರೂ ॥ ಭೂಸಲಿಲ ಪಾವಕ ಸಮೀರಾ- । ಕಾಶ ಮೊದಲಾದಖಿಳ ತತ್ವ ಪ- । ರೇಶಗಿವಧಿ ಷ್ಠಾನವೆಂದರಿತರ್ಚಿಸನವರತಾ ॥ ೨೨ ॥

ಎರಡು ವಿಧದಲಿ ಲೋಕದೊಳು ಜೀ- । ವರುಗಳಿಪ್ಪರು ಸಂತತ ಕ್ಷರಾ- । ಕ್ಷರ ವಿಲಿಂಗಸಲಿಂಗ ಸೃಜ್ಯಾಸೃಜ್ಯ ಭೇದದಲಿ ॥ ಕರೆಸುವದು ಜಡಪ್ರಕೃತಿ ಪ್ರಣವಾ- । ಕ್ಷರ ಮಹಾದಣುಕಾಲನಾಮದಿ । ಹರಿಸಹಿತ ಭೇವಗಳ ಪಂಚಕ ಸ್ಮರಿಸು ಸರ್ವತ್ರಾ ॥ ೨೩ ॥

ಜೀವಜೀವರ ಭೇದ ಜಡಜಡ । ಜೀವಜಡಗಳ ಭೇದ ಪರಮನು । ಜೀವಜಡಸುವಿಲಕ್ಷಣನು ಯೆಂದರಿದು ನಿತ್ಯದಲಿ ॥ ಈ ವಿರಿಂಚಾಂಡ ದೊಳು ಯಿಲ್ಲಾ । ಠಾವಿನಲಿ ತಿಳಿದೈದುಭೇದ ಕ- । ಳೇವರದೊಳರಿತ ಚ್ಯುತನ ಪದವೈದು ಶೀಘ್ರದಲಿ ॥ ೨೪ ॥

ಆದಿಯಲ್ಲಿ ಕ್ಷರಾಕ್ಷರಾಖ್ಯ । ದ್ವೇಧವಕ್ಷರದೊಳು ರಮಾಮಧು- । ಸೂದನರು ಕ್ಷರಗಳೊಳು ಪ್ರಕೃತಿಪ್ರಣವಕಾಲಗಳು ॥ ವೇಧಮುಖ್ಯತೃ ಣಾಂತಜೀವರ । ಭೇದಗಳನರಿತೀರಹಸ್ಯವ । ಬೋಧಿಸದೆ ಮಂದರಿಗೆ ಸರ್ವತ್ರದಲಿ ಚಿಂತಿಪುದೂ ॥ ೨೫ ॥

ದೀಪದಿಂ ದೀಪಗಳು ಪೊರಮ- । ಟ್ಟಾಪಣಾಲಯಗತ ತಿಮಿರ ಗಳ । ತಾ ಪರೀಹರಗೈಸಿ ತದ್ಗತಪದಾರ್ಥ ತೋರ್ಪಂತೆ ॥ ಸೌಪರಣಿವರ ವಾಹನನು ಬಹು । ರೂಪನಾಮದಿ ಯೆಲ್ಲ ಕಡೆಯಲಿ । ವ್ಯಾಪಿಸಿದ್ದು ಯಥೇಷ್ಟ ಮಹಿಮೆಯ ತೋರ್ಪ ತಿಳಿಸದಲೆ ॥ ೨೬ ॥

ನಳಿನಮಿತ್ರಗೆ ಇಂದ್ರಧನು ಪ್ರತಿ- । ಫಲಿಸುವಂತೆ ಜಗತ್ರಯವು ಕಂ- । ಗೊಳಿಪದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ ॥ ತಿಳಿಯೆ ತ್ರಿಕಕುಬ್ಧಾಮನತಿ ಮಂ- । ಗಳಸುರೂಪವ ಸರ್ವಠಾವಿಲಿ । ಹೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದಪೋಷಕನು ॥ ೨೭ ॥

ರಸವಿಶೇಷದೊಳತಿವಿಮಲಸಿತ । ವಸನತೋಯಿಸಿಯಗ್ನಿಯೊಳ
ಗಿಡೆ । ಪಸರಿಸುವದು ಪ್ರಕಾಶ ನಸುಗುಂದದಲೆ ಸರ್ವತ್ರ ॥ ತ್ರಿಶಿರದೂ
ಷಣವೈರಿ ಭಕ್ತಿಸು- । ರಸದಿ ತೋಯ್ದು ಮಹಾತ್ಮರನು ಬಾ- । ಧಿಸವು
ಭವದೊಳಗಿದ್ದರೆಯು ಸರಿ ದುರಿತರಾಶಿಗಳು ॥ ೨೮ ॥

ವಾರಿನಿಧಿಯೊಳಗಖಿಳನದಿಗಳು । ಸೇರಿಬೇರೆ ನಿರಂತರದಲಿ ವಿ- ।
ಹಾರಗೈಯುತ ಪರಮಮೋದದಲಿಪ್ಪ ತೆರದಂತೆ ॥ ಮೂರು ಗುಣಗಳ
ಮಾಯೆಯೆನಿಸುವ । ಶ್ರೀರಮಾರೂಪಗಳು ಹರಿಯಲಿ । ತೋರುತಿಪ್ಪವು
ಸರ್ವಕಾಲದಿ ಸಮರಹಿತವೆನಿಸಿ ॥ ೨೯ ॥

ಕೋಕನದಸಖನುದಯ ಘೂಕಾ- । ಲೋಕನಕೆ ಸೊಗಸದಿರೆ
ಭಾಸ್ಕರ । ತಾ ಕಳಂಕನೆ ಯಾಕೃತೀಪತಿ ಜಗನ್ನಾಥನಿರೆ ॥ ಸ್ವೀಕರಿಸಿ
ಸುಖಬಡಲರಿಯದವಿ- । ವೇಕಿಗಳು ನಿಂದಿಸಿದರೇನಹು- । ದೀಕವಿತ್ವವ
ಕೇಳಿ ಸುಖಬಡದಿಹರೆ ಕೋವಿದರು ॥ ೩೦ ॥

ಚೇತನಾಚೇತನಗಳಲಿ ಗುರು । ಮಾತರಿಶ್ವಾಂತರ್ಗತ ಜಗ- ।
ನ್ನಾಥವಿಠಲ ನಿರಂತರದಿ ವ್ಯಾಪಿಸಿ ತಿಳಿಸಿಕೊಳದೆ ॥ ಕಾತುರವ ಪುಟ್ಟಿಸಿ
ವಿಷಯದಲಿ । ಯಾತುಧಾನರ ಮೋಹಿಸುವ ನಿ- । ರ್ಭೀತ ನಿತ್ಯಾನಂದ
ಮಯ ನಿರ್ದೋಷ ನಿರವದ್ಯ ॥ ೩೧ ॥

ಅಂತು ಸಂಧಿ ೧೪ಕ್ಕೆ ಪದ ೪೪೩ಕ್ಕೆ ಪಿತೃಗಣಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೧೫. ಶ್ವಾಸಸಂಧಿ.

ಒಂದು ಘಟಿಕಾ ಪ್ರಾರಂಭವಮಾಡಿ ಒಂದು ಸಂವತ್ಸರದ ವರೆಗೂ ಶ್ರೀ ವಾಯುದೇವರು ಶ್ವಾಸ ಜಪವಮಾಡಿ ಗತಿ ಕೊಡುತ್ತಾರೆಂದು ತಂತ್ರಸಾರೋಕ್ತ ಕ್ರಮದಿಂದ ಇವರಲ್ಲಿ ಹೇಳುತ್ತಾರೆ.

॥ ಶ್ರೀಪಾವಮಾನಾಯ ನಮಃ ॥

ರಾಗ ಪರಾಳಿ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಭಾರತೀಶನು ಘಳಿಗೆಯೊಳು ಮು- । ನ್ನೂರ ಅರವತ್ತುಸುರ ಜಪಗಳ । ತಾ ರಚಿಸುವನು ಸರ್ವಜೀವರೊಳಿದ್ದು ಬೇಸರದೇ ॥ ಕಾರುಣಿಕ ನವರವರ ಸಾಧನ । ಪೂರಯಿಸಿ ಭೂಸ್ವರ್ಗನರಕವ । ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು ॥ ೧ ॥

ತಾಸಿಗೊಂಭೈನೂರು ಶ್ವಾಸೋ- । ಚ್ಛ್ವಾಸಗಳ ನಡೆಸುತಲಿ ಚೇತನ । ರಾಶಿಯೊಳು ಹಗಲಿರುಳು ಜಾಗ್ರತನಾಗಿ ನಿತ್ಯದಲಿ ॥ ಈ ಸುಮನಸೋತ್ತಂಸ ಲೇಶಾ- । ಯಾಸವಿಲ್ಲದೆ ಪೋಷಿಸುತ ಮಾ- । ಲೇಶ ನಂಘ್ರಿಸರೋಜಮೂಲದಲಿಪ್ಪ ಕಾಣಿಸದೆ ॥ ೨ ॥

ಅರಿವುದೊಂದ್ಯಾಮದೊಳು ಶ್ವಾಸಗ- । ಳೆರಡುಸಾವಿರದೇಳುನೂರನು । ಶರಸಹಸ್ರದ ಮೇಲೆ ನಾನೂರಹವು ದ್ವಿತಿಯಕ್ಕೆ ॥ ಮರಳಿ ಯಾಮತ್ರಯಕೆ ವಸುಸಾ- । ವಿರದ ಮೇಲ್ನೂರೆಣಿಕೆಯಲಿ ಹ- । ನ್ನೆರಡು ತಾಸಿಗೆ ಹತ್ತುಸಾವಿರದೆಂಟು ನೂರಹವು ॥ ೩ ॥

ಒಂದುದಿನದೊಳಗನಿಲನಿಪ್ಪ- । ತ್ತೊಂದುಸಾವಿರದಾರುನೂರು ಮು- । ಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರೆವ ॥ ಎಂದು ಪವನನ ಪೊಗಳುತಿರು ಯೆಂ- । ದೆಂದು ಮರೆಯದೆ ಯಾಮಹಿಮೆ ಸಂ- । ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ॥ ೪ ॥

ಮೂರುಲಕ್ಷದ ಮೇಲೆ ವಿಂಶತಿ । ಯಾರೆರಡು ಸಾವಿರವು ಪಕ್ಷಕೆ । ಆರುಲಕ್ಷದ ಮೇಲೆ ನಾಲ್ವತ್ತೆಂಟುಸಾವಿರವು ॥ ಮಾರುತನು ಮಾಸಕೆ ಜಪಿಸಿ ಸಂ- । ಸಾರಸಾಗರದಿಂದೆ ಸುಜನರ । ಪಾರುಗಾಣಿಸಿ ಸಲಹುವನು ಬಹು ಭೋಗಗಳನಿತ್ತು ॥ ೫ ॥

ಎರಡುತಿಂಗಳಿಗಹವು ಋತು ಭೂ- । ಸುರರು ತಿಳಿವದು ಶ್ವಾಸ ಜಪ ಹ- । ನ್ನೆರಡುಲಕ್ಷದ ಮೇಲೆ ತೊಂಭತ್ತಾರುಸಾಹಸ್ರ ॥ ಕರೆಸು ವದು ಆಯನಾಹ್ವಯದಲರೆ । ವರುಷ ಮೂವತ್ತೆಂಟು ಲಕ್ಷೋ- । ಪರಿ ತಿಳಿವದೆಂಭತ್ತು ಯೆಂಟುಸಹಸ್ರ ಕೋವಿದರು ॥ ೬ ॥

ವರುಷಕಿವರಿಮ್ಮಡಿ ಜಪಂಗಳ । ಗುರುವರಿಯ ತಾ ಮಾಡಿ ಮಾಡಿಸಿ । ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ॥ ಸುರ ವಿರೋಧಿಗಳೊಳಗೆ ನೆಲಸಿ- ॥ ದ್ದರವಿದೂರ ತಮೋಧಿಕಾರಿಗ- । ೯ರವರಿತು ಸೋಹಮ್ಮುಪಾಸನೆ ಮಾಳ್ಪನವರಂತೆ ॥ ೭ ॥

ಇನಿತುಪಾಸನೆ ಸರ್ವಜೀವರೊ- । ಳನಿಲದೇವನು ಮಾಡುತಿರೆ ಚಿಂ- । ತನೆಯ ಮಾಡದೆ ಕಂಡನೀರೊಳು ಮುಳುಗಿ ನಿತ್ಯದಲಿ ॥ ಮನೆ ಯೊಳಗೆ ಕೃಷ್ಣಾಜಿನಾದ್ಯಾ- । ಸನದಿ ಕುಳಿತು ವಿಶಿಷ್ಟ ಬಹು ಸ- । ಜ್ಜನ ನೆನಿಸಿ ಜಪಮಣಿಗಳೆಣಿಸಿದರೇನು ಬೇಸರದೆ ॥ ೮ ॥

ಓದನೋದಕವೆರಡು ತೇಜದೊ- । ಳೈದುವವು ಲಯ ತದಭಿಮಾನಿಗ- । ಳಾದ ಶಿವಪವನರು ರಮಾಧೀನತ್ವವೈದುವರು ॥ ಈದಿವಿಜರೊಡಗೂಡಿ ಶ್ರೀಮಧು- । ಸೂದನನ ಐದುವಳು ಯೆಂದರಿ- । ದಾದರದಲನ್ನೋದಕವ ಕೊಡುತುಣುತ ಸುಖಿಸುತಿರು ॥ ೯ ॥

ಜಾಲಿತ್ರೋಪ್ಪಲಜಾವಿಗಳು ಮೆ-। ದ್ದಾಲಯದಿ ಸ್ವೇಚ್ಛಾನುಸಾರದಿ। ಪಾಲಗರೆವಂದದಲಿ ಲಕ್ಷ್ಮೀರಮಣ ತನ್ನವರಾ॥ ಕೇಳುಕರ್ಮವ ಸ್ವೀಕರಿಸಿ ತ-। ನ್ನಾಲಯದೊಳಿಟ್ಟವರ ಪೊರೆವ ಕೃ-। ಪಾಳು ಕಾಮದ ಕೈರವದಳಶ್ಯಾಮ ಶ್ರೀರಾಮ ॥ ೧೦ ॥

ಶಶಿ ದಿವಾಕರ ಪಾವಕರೊಳಹ। ಅಸಿತಸಿತಲೋಹಿತಗಳಲಿ ಶಿವ। ಶ್ವಸನ ಭಾರ್ಗವಿ ಮೂವರೊಳು ಶ್ರೀಕೃಷ್ಣ ಹಯವದನ॥ ವಸುಧಿಪಾರ್ದನ ತ್ರಿವೃತುವೆನಿಸೀ। ವಸುಮತಿಯೊಳನ್ನೋದಕಾನಲ। ಪೆಸರಿನಿಂದಲಿ ಸರ್ವಜೀವರ ಸಲಹುವನು ಕರುಣಿ ॥ ೧೧ ॥

ದೀಪ ಕರದಲಿ ಪಿಡಿದು ಕಾಣದೆ। ಕೂಪದೊಳು ಬಿದ್ದಂತೆ ವೇದವು-। ಶೋಸನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ॥ ಶ್ರೀಪವನಮುಖವಿನುತನಮಲ ಸ್ವ-। ರೂಪಗಳ ವ್ಯಾಪಾರ ತಿಳಿಯದೆ-। ಪಾಪಪುಣ್ಯಕೆ ಜೀವಕರ್ತೃವಕರ್ತೃ ಹರಿಯೆಂಬಾ ॥ ೧೨ ॥

ಅನಿಲದೇವನು ವಾಙ್ಮನೋಮಯ-। ನೆನಿಸಿ ಪಾವಕ ವರುಣಸಂಕ್ರಂ। ದನ ಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು॥ ನೆನೆನೆನೆದು ಉಚ್ಚರಿಸುತಲಿ ನ-। ಮ್ಮನು ಸದಾ ಸಂತೈಸುವನು ಸ-। ನ್ಮುನಿಗಣಾರಾಧಿತಪದಾಂಬುಜ ಗೋಜಸುರರಾಜ ॥ ೧೩ ॥

ವಾದವೆನಿಸವು ವಾಙ್ಮನೋಮಯ। ಪಾದರೂಪದ್ವಯಗಳೊಳು ಪ್ರ-। ಹ್ಲಾದಪೋಷಕ ಸಂಕರುಷಣಾಹ್ವಯದಿ ನೆಲಸಿದ್ದು॥ ವೇದಶಾಸ್ತ್ರಪುರಾಣಗಳ ಸಂ-। ವಾದರೂಪದಿ ಮನನಗೈವುತ। ಮೋದಮಯ ಸುಖವಿತ್ತು ಸಲಹುವ ಸರ್ವಸಜ್ಜನರ ॥ ೧೪ ॥

ಗಂಧವಹ ದಶದಿಶೆಗಳೊಳಗರ-। ವಿಂದಸೌರಭ ಪಸರಿಸುತ ಘ್ರಾ-। ಣೇಂದ್ರಿಯಗಳಿಗೆ ಸುಖವನೀಯುತ ಸಂಚರಿಸುವಂತೆ॥ ಇಂದಿರೇಶನ ಸುಗುಣಗಳ ದೈ-। ನಂದಿನದಿ ತುತಿಸುತನುಮೋದಿಸು-। ತಂಥಬಧಿರಮೂಕನಂತಿರು ಮಂದಜನರೊಡನೆ ॥ ೧೫ ॥

ಶ್ರೀರಮಣನರಮನೆಯ ಪೂರ್ವ । ದ್ವಾರದಲ್ಲಿಹ ಸಂಜ್ಞ ಸೂರ್ಯ
ಗ । ಭಾರತೀಪತಿ ಪ್ರಾಣನೊಳಗಿಹ ಲಕುಮಿನಾರಯಣನ ॥ ಸೇರಿ ಮನು
ಜೋತ್ತಮರು ಸರ್ವಶ- । ರೀರಗತನಾರಾಯಣನ ಅವ- । ತಾರಗುಣ
ಗಳ ತುತಿಸುತಲಿ ಮೋದಿಸರು ಮುಕ್ತಿಯಲಿ ॥ ೧೬ ॥

ಪ್ರಣವಪ್ರತಿಪಾದ್ಯನ ಪುರದ ದ- । ಕ್ಷಿಣವಾಟದಲಿಪ್ಪ ಶಶಿರೋ- ।
ಹಿಣಿಗತ ವ್ಯಾನಸ್ಥ ಕೃತಿಪ್ರದ್ಯುಮ್ನ ರೂಪವನು ॥ ಗುಣಗಳನು ಸಂತುತಿ
ಸುತಲಿ ಪಿತೃ- । ಗಣ ಗದಾಧರನತಿವಿಮಲ ಪ- । ಟ್ಟಣದೊಳಗೆ ಸ್ವೇಚ್ಛಾ
ನುಸಾರದಿ ಸಂಚರಿಸುತಿಹರು ॥ ೧೭ ॥

ಅಮಿತವಿಕ್ರಮಸಾಲಯುದ ಪ- । ಶ್ಚಿಮಕವಾಟದಿ ಪತಿಸಹಿತ
ಸಂ- । ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ॥ ಸುಮ
ನಸಾಸ್ಯನೊಳಿಪ್ಪಸಾನಗ । ದಮನ ಸಂಕರುಷಣನ ನಿಜಹೃ- । ತ್ಕಮಲ
ದೊಳು ಧ್ಯಾನಿಸುವ ಋಷಿಗಣನೈದಿ ಸುಖಿಸುವರೂ ॥ ೧೮ ॥

ಸ್ವರಮಣನ ಗುಣರೂಪ ಸಪ್ತ । ಸ್ವರಗಳಿಂದಲಿ ಪಾಡುತಿಹ
ತುಂ- । ಬುರುಪ ಮೊದಲಾದಖಿಳ ಗಂಧರ್ವರು ರಮಾಪತಿಯ ॥ ಪುರದ
ಉತ್ತರಬಾಗಿಲಾಧಿಪ । ಸುರಪಶಚಿಗ ಸಮಾನವಾಯುಗ । ಹರಿನ್ಮಣಿ
ನಿಭ ಶಾಂತಿಪತಿಯನಿರುದ್ಧನೈದುವರು ॥ ೧೯ ॥

ಗರುಡಶೇಷಸುರೇಂದ್ರಮುಖ ಪು- । ಷ್ಕರನೆ ಕಡೆಯಾಗಿಪ್ಪಖಿಳ
ನಿ- । ರ್ಜರರು ಊರ್ಧ್ವದ್ವಾರಗತ ಭಾರತಿಯುದಾನನೊಳು ॥ ಮೆರೆವ
ಮಾಯಾವಾಸುದೇವನ । ಪರಮಮಂಗಳವಯುವಗಳ ಮಂ- । ದಿರವ
ನೈದಿ ಸದಾ ಮುಕುಂದನ ನೋಡಿ ಸುಖಿಸುವರು ॥ ೨೦ ॥

ದ್ವಾರಪಂಚಕಪಾಲಕರೊಳಿಹ । ಭಾರತೀಪ್ರಾಣಾಂತರಾತ್ಮಕ ।
ಮಾರಮಣನೈರೂಪ ತತ್ತದ್ವಾರದಲಿ ಬಪ್ಪ ॥ ಮೂರೆರಡುವಿಧ ಮುಕ್ತಿ
ಯೋಗ್ಯರ । ತಾರತಮ್ಯವನರಿತವರ ಕಂ- । ಸಾರಿ ಸಂಸಾರಾಬ್ಧಿ
ದಾಂಟಿಸಿ ಮುಕ್ತರನು ಮಾಳ್ಪ ॥ ೨೧ ॥

ಬೆಳಗಿಧೂಜೆಯು ನೋಳ್ಪರಿಗೆ ಥಳ- । ಥಳಿಸುತಲಿ ಕಂಗೊಳಿಸು ವಂದದಿ । ತೊಳೆದು ದೇಹವ ನಾಮಮುದ್ರೆಗಳಿಂದಲಂಕರಿಸಿ ॥ ಒಲಿಸಿ ನಿತ್ಯ ಕುತರ್ಕಯುಕ್ತಿಗ- । ಳಲವಬೋಧರ ಶಾಸ್ತ್ರಮರ್ಮವ । ತಿಳಿಯು ದಿಹ ನರ ಬರಿದೆ ಇದರೊಳು ಶಂಕಿಸಿದರೇನೂ ॥ ೨೨ ॥

ಉದಧಿಯೊಳಗೂರ್ಮಿಗಳು ತೋರ್ಪಂ- । ದದಲಿ ಹಂಸೋದ್ಗೀಥ ಹರಿ ಹಯ- । ವದನ ಕೃಷ್ಣಾದ್ಯಮಿತನವತಾರಗಳು ನಿತ್ಯದಲಿ ॥ ಪದು ಮನಾಭನೊಳಿರುತಿಹವು ಸ- । ರ್ವದ ಸಮಸ್ತಪ್ರಾಣಿಗಳ ಚಿ- । ದ್ಹೃದಯಗತರೂಪಗಳನವ್ಯವಧಾನದಲಿ ಬಿಡದೆ ॥ ೨೩ ॥

ಶರಧಿಯೊಳು ಮಕರಾದಿಜೀವರು । ಇರುಳುಹಗಲೇಕಪ್ರಕಾರದಿ । ಚರಿಸುತನುವೋದಿಸುತಲಿಸ್ಪಂದದಿ ಜಗತ್ರಯವು ॥ ಇರುತಿಹವು ಜಗ ದೀಶನುದರದಿ । ಕರೆಸುವದು ಪ್ರತಿಬಿಂಬನಾಮದಿ । ಧರಿಸಿಹವು ಹರಿ ನಾಮರೂಪಂಗಳನು ಅನವರತ ॥ ೨೪ ॥

ಜನನಿ ಸೌಖ್ಯಪದಾರ್ಥಗಳ ಭೋ- । ಜನವ ಮಾಡಲು ಗರ್ಭ ಗತ ಶಿಶು । ದಿನದಿನದಲಭಿವೃದ್ಧಿಯೈದುವ ತೆರದಿ ಜೀವರಿಗೆ ॥ ವನಜ ನಾಭನು ಸರ್ವರಸ ವುಂ- । ಡುಣಿಸಿ ಸಂರಕ್ಷಿಸುವ ಜಾಹ್ನವಿ । ಜನಕ ಜನ್ಮಾದ್ಯಖಿಳದೋಷವಿದೂರ ಗಂಭೀರ ॥ ೨೫ ॥

ಆಶೆಗೊಳಗಾದವನು ಜನರಿಗೆ । ದಾಸನೆನಿಸುವನಾಶೆಯನು ನಿಜ । ದಾಸಗೈದಿಹ ಪುಂಸಗೆಲ್ಲರು ದಾಸರೆನಿಸುವರೂ ॥ ಶ್ರೀಶನಂಘ್ರಿಸರೋಜ ಯುಗಳ ನಿ- । ರಾಶೆಯಿಂದಲಿ ಭಜಿಸೆ ವೊಲಿದು ರ- । ಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರಿ ॥ ೨೬ ॥

ದ್ಯುನದಿಯಾದ್ಯಂತವನು ಕಾಣದೆ । ಮನುಜನೇಕತ್ರದಲಿ ತಾ ಮು- । ಜ್ಜನವಗೈಯೆ ಸಮಸ್ತದೋಷ ವಿಮುಕ್ತನಹ ತೆರದಿ ॥ ಅನಘನ ಮಲಾನಂತನಂತ ಸು- । ಗುಣಗಳೊಳಗೊಂದೇ ಗುಣೋಪಾ- । ಸನವ ಗೈವ ಮಹಾತ್ಮ ಧನ್ಯ ಕೃತಾರ್ಥನೆನಿಸುವನು ॥ ೨೭ ॥

ವಾಸುದೇವನು ಕರೆಸುವನು ಕಾ- । ರ್ಪಾಸನಾಮದಿ ಸಂಕರುಷ ಣನು । ವಾಸವಾಗಿಹ ತೂಲದೊಳು ತಂತುಗನು ಪ್ರದ್ಯುಮ್ನ ॥ ವಾಸ ರೂಪನಿರುದ್ಧದೇವನು । ಭೂಷಣನು ತಾನಾಗಿ ತೋರ್ಪ ಪ- । ರೇಶ ನಾರಾಯಣನು ಸರ್ವದ ಮಾನ್ಯ ಮಾನದನೂ ॥ ೨೮ ॥

ಲಲನೆಯಿಂದೊಡಗೂಡಿ ಚೈಲಗ- । ಳೊಳಗೆ ಓತಪ್ರೋತರೂಪದಿ । ನೆಲಸಿಹನು ಚತುರಾತ್ಮಕ ಜಗನ್ನಾಥವಿಟ್ಠಲನು ॥ ಛಳಿಬಿಸಿಲು ಮಳೆ ಘಾಳಿಯೊಂದರೆ- । ಘಳಿಗೆ ಬಿಡದಲೆ ಕಾವನೆಂದರಿ- । ದಿಳೆಯೊಳರ್ಚಿಸು ತಿರು ಸದಾ ಸರ್ವಾಂತರಾತ್ಮಕನ ॥ ೨೯ ॥

ಅಂತು ಸಂಧಿ ೧೫ಕ್ಕೆ ಪದ ೪೭೨ಕ್ಕೆ ಶ್ವಾಸಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೧೬. ದತ್ತಸ್ವಾತಂತ್ರ್ಯಸಂಧಿ.

ಈ ಸಂಧಿಯಲ್ಲಿ ಜೀವನು ಉದಯಮೊದಲು ಶಯನಪರ್ಯಂತ ಯಾವಯಾವ ಕರ್ಮ ಮಾಡುತ್ತಾನೋ ಅವನ್ನು ಶ್ರೀಪರಮಾತ್ಮಗೆ ಅನನ್ಯಬುದ್ಧಿಯಿಂದ ಮನಃಪೂರ್ವಕವಾಗಿ ಅರ್ಪಿಸಬೇಕಾಗುತ್ತದೆ. ಆದರೆ ಜೀವನ ಕರ್ತೃತ್ವವೆಂಬ ಸ್ವಾತಂತ್ರ್ಯವು ಈಶ್ವರನಂತೆ ಸ್ವಾಧೀನ ಕರ್ತೃತ್ವವಲ್ಲ; ಪರಾಧೀನವಾದದ್ದು, ಈಶ್ವರನು ಕೊಟ್ಟದ್ದು ಎಂಬ ವಿಷಯವನ್ನೂ, ಅದನ್ನನುಸರಿಸಿದ ಕೆಲವು ತತ್ವಗಳನ್ನೂ ಹೇಳುತ್ತಾರೆ.

॥ ಶ್ರೀಉಪೇಂದ್ರಾಯ ನಮಃ ॥

ರಾಗ ತೋಡಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಕಾರುಣಿಕ ಹರಿ ತನ್ನೊಳಿಪ್ಪಾ- । ಪಾರಸ್ವಾತಂತ್ರ್ಯಗುಣದಿ ನಾ- । ನೂರು ತೆಗೆದು ಸಪಾದ ಆರೊಂದಧಿಕ ಅರುವತ್ತು ॥ ನಾರಿಗಿತ್ತದ್ವಿಷೋಡಶಾಧಿಕ । ನೂರು ಪಾದತ್ರಯವ ತನ್ನ ಶ- । ರೀರದೊಳಗೀಪರಿ ವಿಭಾಗವ ಮಾಡಿ ತ್ರಿಪದಾಹ್ವ ॥ ೧ ॥

ಸತ್ಯಲೋಕಾಧಿಪನೊಳಗೆ ಐ- । ವತ್ತೆರಡು ಪವಮಾನನೊಳು ನಾ- । ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು ॥ ಚಿತ್ತಜೇಂದ್ರರೊಳೈದಧಿಕದಶ । ತತ್ವಮಾನಿಗಳೆನಿಪ ಸುರರೊಳು । ಹತ್ತು ಯಿಾರ್ದೈದಖಿಳಜೀವರೊಳಿಟ್ಟ ನಿರವದ್ಯಾ ॥ ೨ ॥

ಕಲಿಮೊದಲುಗೊಂಡಖಿಳದಾನವ- । ರೊಳಗೆ ನಾಲ್ವತ್ತೈದು ಯಿಾಪರಿ । ತಿಳಿದುಪಾಸನೆ ಮಾಡು ಮರೆಯದೆ ಪರಮಭಕುತಿಯಲಿ ॥ ಇಳೆಯೊಳಗೆ ಸಂಚರಿಸು ಲಕ್ಷ್ಮೀ- । ನಿಲಯನಾಳಾನೆಂದು ಸರ್ವ । ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ॥ ೩ ॥

ಅವನಿಶ ಸ್ವಾಮಿತ್ವಧರ್ಮವ । ಸ್ವವಶಮಾತ್ಯರಿಗಿತ್ತು ತಾ ಮ- । ತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ ॥ ಕವಿಭಿರೀಡಿತ ತನ್ನ ಕಳೆಗಳ । ದಿವಿಜದಾನವಮಾನವರೊಳಿ- । ಟ್ಟವಿರತ ಗುಣತ್ರಯಜ ಕರ್ಮವ ಮಾಡಿ ಮಾಡಿಸುವಾ ॥ ೪ ॥

ಪುಣ್ಯಪಾಪಗಳೀತೆರದಿ ಕಾ- । ರುಣ್ಯಸಾಗರ ದೇವದಾನವ । ಮಾನವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ ॥ ಬನ್ನಬಡಿಸುವ ಭಕ್ತಿ ಹೀನರ । ಸನ್ನುತಸುಕರ್ಮಗಳ ಫಲವ ಪ್ರ- । ಪನ್ನರಿಗೆ ಕೊಟ್ಟವರ ಸುಖ ಬಡಿಸುವನು ಸುಭುಜಾಕ್ಷ ॥ ೫ ॥

ಮಾಣಿಕವ ಕೊಂಡಂಗಡಿಯೊಳಜಿ- । ವಾಸ ಕೊಟ್ಟಾ ಪುರುಷನ ಸಮಾ- । ಧಾನ ಮಾಡುವ ತೆರದಿ ಪೃತ್ಯರು ನಿತ್ಯದಲಿ ಮಾಳ್ಪ ॥ ದಾನ ಯಜ್ಞಾದಿಗಳ ಫಲಯುಜ । ಮಾನ ತಾನಪಹರಿಸಿ ಅಸಮೀ- । ಚೀನ ಸುಖಗಳ ಕೊಟ್ಟು ಅಸುರರ ಮತ್ತರನು ಮಾಳ್ಪ ॥ ೬ ॥

ಏಣಲಾಂಛನನಮಲಕಿರಣ ಕ್ರ- । ಮೇಣ ವೃದ್ಧಿಯನೈದಿ ಲೋಗರ। ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ ॥ ವೈನತೇಯಾಂಸ ಗನ ಮೂರ್ತಿ । ಧ್ಯಾನವುಳ್ಳ ಮಹಾತ್ಮರಿಗೆ ಸು- । ಜ್ಞಾನಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವೂ ॥ ೭ ॥

ಜನಪನಂಕೆಯ ಚೋರ ಪೊಳಲೊಳು । ಧನವ ಕದ್ದೊಯ್ದೀಯ ಲವನವ- । ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ ॥ ಅನು ಚಿತೋಚಿತಕರ್ಮ ಕೃಷ್ಣಾ- । ರ್ಪಣವೆನಲು ಕೈಕೊಂಡು ತನ್ನರ- । ಮನೆಯೊಳಿಟ್ಟಾನಂದಬಡಿಸುವ ಮಾಧವಾನತರಾ ॥ ೮ ॥

ಅನ್ನದನ್ನಾದನ್ನನಾಮಕ । ಮುನ್ನ ಪೇಳ್ದ ಪ್ರಕಾರ ಜೀವರೊ- । ಳನ್ನರೂಪ ಪ್ರವೇಶಗೈದವರವರ ವ್ಯಾಪಾರ ॥ ಬನ್ನಬಡದಲೆ ಮಾಡಿ ಮಾಡಿಸಿ । ಧನ್ಯರಿವರಹುದೆಂದೆನಿಸಿ ತ್ರೈ- । ಗುಣ್ಯವರ್ಜಿತ ತತ್ತದಾಹ್ವಯನಾಗಿ ಕರೆಸುವನೂ ॥ ೯ ॥

ಸಲಿಲಬಿಂದು ಪಯೋಬ್ಧಿಯೊಳು ಬೀ- । ಳಲು ವಿಕಾರವನೈದಬ
ಲ್ಲುದೆ । ಜಲವು ತದ್ರೂಪವನೆ ಐದುವದೆಲ್ಲ ಕಾಲದಲಿ ॥ ಕಲಿಮಲಾಪಹ
ಸರ್ಚಿಸುವ ಸ- । ತ್ಸ್ಥಲಜರ ಶುಕರ್ಮಗಳು ತಾ ನಿ- । ಷ್ಫಲುಷಕರ್ಮ
ಗಳಾಗಿ ಪುರುಷಾರ್ಥಗಳ ಕೊಡುತಿಹವೂ ॥ ೧೦ ॥

ಮೊಗದೊಳಗೆ ಮೊಗವಿಟ್ಟು ಮುದ್ದಿಸಿ । ಮಗುವಿನಂ ಬಿಗಿದಪ್ಪಿ
ನೇಹದಿ । ತೆಗೆದು ತನ್ನ ಸ್ತನಗಳುಣಿಸುವ ಜನನಿಯಂದದಲಿ ॥ ಅಗಣಿ
ತಾತ್ಮನು ತನ್ನ ಪಾದಾ- । ಬ್ಜಗಳ ಧೇನಿಪ ಭಕ್ತಜನರಿಗೆ । ಪ್ರಘಟಕನು
ತಾನಾಗಿ ಸೌಖ್ಯಗಳೀವ ಸರ್ವತ್ರ ॥ ೧೧ ॥

ತೋಟಿಗನು ಭೂಮಿಯೊಳು ಬೀಜವ । ನಾಟಬೇಕೆಂದೆನುತ ಹಿತ
ನಲಿ । ಮೂಟೆಯಿಂ ನೀರಿತ್ತಿ ಸಸಿಗಳ ಸಂತಯಿಸುವಂತೆ ॥ ವಾಟುಬಡದಲೆ
ಜಗದಿ ಜೀವರ । ಘೋಟಕಾಸ್ಯನು ಸೃಜಸಿ ಯೋಗ್ಯತೆ । ದಾಟಗೊಡ
ದಲೆ ಸಲಹುತಿಪ್ಪನು ಸರ್ವಕಾಲದಲಿ ॥ ೧೨ ॥

ಭೂಮಿಯೊಳು ಜಲವಿದೆ ತೃಷಾರ್ತನು । ತಾ ಮರೆದು ಮೊಗವೆತ್ತಿ
ಯೆಣ್ದೆಸೆ । ವ್ಯೋಮಮಂಡಲದೊಳಗೆ ಕಾಣದೆ ಹುಡುಕುವಂದದಲಿ ॥
ಶ್ರೀಮನೋರಮ ಸರ್ವರಂತ- । ರ್ಯಾಮಿಯಾಗಿರೆ ತಿಳಿಯದನುದಿನ ।
ಭ್ರಾಮಕರು ಭಜಿಸುವರು ಭಕುತಿಯಲನ್ಯದೇವತೆಯ ॥ ೧೩ ॥

ಮುಖ್ಯಫಲವೈಕುಂಠ ಮುಖ್ಯಾ- । ಮುಖ್ಯಫಲ ಮಹರಾದಿಲೋ
ಕಾ- । ಮುಖ್ಯಫಲವೈಷಯಿಕವೆಂದರಿದತಿಭಕುತಿಯಿಂದ ॥ ರಕ್ಕಸಾರಿಯ
ಭಜಿಸುತಲೆ ನಿ- । ರ್ದುಃಖನಾಗು ನಿರಂತರದಿ ನೊರೆ । ಹೊಕ್ಕವರ ಬಿಡ
ಭಕ್ತವತ್ಸಲ ಭಾರತೀಶ ಪಿತ ॥ ೧೪ ॥

ವ್ಯಾಧಿಯಿಂ ಪೀಡಿತ ಶಿಶುವಿಗೆ ಗು- । ಡೋದಕವನೆರೆದದಕೆ
ಔಷಧಿ । ತೇದು ಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ ॥ ಬಾದ
ರಾಯಣ ಭಕ್ತಜನಕ ಪ್ರ- । ಸಾದರೂಪಕನಾಗಿ ಭಾಗವ- । ತಾದಿಯಲಿ
ಪೇಳಿದನು ಧರ್ಮಾರ್ಥಗಳೆ ಫಲವೆಂದು ॥ ೧೫ ॥

ದೂರದಲ್ಲಿಹ ಪರ್ವತ ಘನಾ- । ಕಾರ ತೋರ್ಪದು ನೋಳ್ಪ ಜನರಿಗೆ । ಸಾರಿಗೈಯಲು ಸರ್ಪವ್ಯಾಘ್ರಗಳಿಂದೆ ಭಯವಿಹುದು ॥ ಘೋರತರ ಸಂಸಾರ ಸೌಖ್ಯಾ- । ಸಾರತರವೆಂದರಿತು ನಿತ್ಯ ರ- । ಮಾರಮಣನಾರಾಧಿಸುವರದರಿಂದೆ ಬಲ್ಲವರು ॥ ೧೬ ॥

ಕೆಸರ ಘಟಗಳ ಮಾಡಿ ಬೇಸಿಗೆ । ಬಿಸಿಲೊಳಿಟ್ಟೊಣಗಿಸಿದರವು ಘನ । ರಸವ ತುಂಬಲುಬಹುದೆ ಸರ್ವಸ್ವತಂತ್ರ ನಾನೆಂಬ ॥ ಪಶುನರರೇನೇನು ಮಾಳ್ಪಾ- । ನಶನ ದಾನ ಸ್ನಾನಕರ್ಮಗ- । ಳೊಸರಿಪೋಪವು ಬರಿದೆ ದೇಹಾಯಾಸವನೆ ಕೊಟ್ಟು ॥ ೧೭ ॥

ಎರಡು ದೀಕ್ಷೆಗಳಿಹವು ಬಾಹ್ಯಾಂ- । ತರವೆನಿಪ ನಾಮುದಲಿ ಬುಧರಿಂ- । ದರಿತು ದೀಕ್ಷಿತನಾಗು ದೀರ್ಘದ್ವೇಷಗಳ ಬಿಟ್ಟು ॥ ಹರಿಯೆ ಸರ್ವೋತ್ತಮ ಕ್ಷರಾಕ್ಷರ । ಪುರುಷಪೂಜಿತನಾದ ಜನ್ಮಾ- । ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ॥ ೧೮ ॥

ಹೇಯವಸ್ತುಗಳಿಲ್ಲವೂಪಾ- । ದೇಯವಸ್ತುಗಳಿಲ್ಲ ನ್ಯಾಯಾ- । ನ್ಯಾಯಧರ್ಮಗಳಿಲ್ಲ ದ್ವೇಷಾಸೂಯೆ ಮೊದಲಿಲ್ಲ ॥ ತಾಯಿತಂದೆಗಳಿಲ್ಲ ಕಮಲದ- । ಳಾಯತಾಕ್ಷಗೆ ಯೆನಲು ಯಿಾಸೋ- । ಕಾಯಿಯಂದದಿ ಮುಳುಗಗೊಡದೆ ಭವಾಬ್ಧಿ ದಾಟಿಸುವಾ ॥ ೧೯ ॥

ಮಂದನಾದರು ಸರಿಯೆ ಗೋಪೀ- । ಚಂದನಶ್ರೀಮುದ್ರೆಗಳನಲ- । ವಿಂದ ಧರಿಸುತ ಶ್ರೀತುಲಸಿ ಪದುಮಾಕ್ಷಿ ಸರಗಳನೂ । ಕಂಧರದ ಮಧ್ಯದಲಿ ಧರಿಸಿ ಮು- । ಕುಂದ ಶ್ರೀಭೂರಮಣ ತ್ರಿಜಗ- । ದ್ವಂದ್ಯ ಸರ್ವಸ್ವಾಮಿ ಮಮಕುಲದೈವವೆನೆ ಪೊರೆವಾ ॥ ೨೦ ॥

ಪ್ರಾಯಧನಮದದಿಂದ ಜನರಿಗೆ । ನಾಯಕಪ್ರಭುವೆಂಬೆ ಪೂರ್ವದಿ । ತಾಯ ಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯದೆಲೈ ॥ ಕಾಯ ನಿನ್ನನು ಬಿಟ್ಟು ಪೋಗಲು । ರಾಯ ನೀನೆಂಬರೆ ಪ್ರಭುತ್ವ ಪ- । ಲಾಯನವನೈದಿತು ಸಮಿಾಪದಲಿದ್ದರದು ತೋರು ॥ ೨೧ ॥

ವಾಸುದೇವೈಕಪ್ರಕಾರದಿ । ಈಶನೆನಿಸುವ ಬ್ರಹ್ಮರುದ್ರಶ- । ಚೀಶ ಮೊದಲಾದಮರರೆಲ್ಲರು ದಾಸರೆನಿಸುವರು ॥ ಈ ಸುಮಾರ್ಗವ ಬಿಟ್ಟು ಸೋಹಮು- । ಪಾಸನೆಯ ಗೈವ ನರ ದೇಹಜ । ದೈತಿಕ ಕ್ಲೇಶಗಳು ಬರಲದನೇಕೆ ಬಿಡಿಸಿಕೊಳ ॥ ೨೨ ॥

ಆ ಪರಬ್ರಹ್ಮನಲಿ ತ್ರಿಜಗ- । ದ್ವ್ಯಾಪಕತ್ವ ನಿಯಾಮಕತ್ವ । ಸ್ಥಾಪಕತ್ವ ವರತ್ವವೀಶತ್ವಾದಿ ಗುಣಗಳಿಗೆ ॥ ಲೋಪವಿಲ್ಲೇಕಪ್ರಕಾರ ಸ್ವ- । ರೂಪವೆನಿಪವು ಸರ್ವಕಾಲದಿ । ಪೋಪವಲ್ಲಿವು ಜೀವರಿಗೆ ದಾಸತ್ವದೋಪಾದಿ ॥ ೨೩ ॥

ನಿತ್ಯನೂತನ ನಿರ್ವಿಕಾರ ಸು- । ಹೃತ್ತಮ ಪ್ರಣವಸ್ಥ ವರ್ಣೋ- । ತ್ಪತ್ತಿಕಾರಣ ವಾಙ್ಮನೋಮಯ ಸಾಮಗಾನರತ । ದತ್ತಕಪಿಲಹಯಾಸ್ಯರೂಪದಿ । ಪೃತ್ ಪೃಥಗ್ಜೀವರೊಳಗಿದ್ದು ಪ್ರ- । ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ ॥ ೨೪ ॥

ಶ್ರುತಿಗಳಾತನ ಮಾತು ವಿಮಲ । ಸ್ಮೃತಿಗಳಾತನ ಶಿಕ್ಷೆ ಜೀವ । ಪ್ರತತಿಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳುತಿಹವು ॥ ಇತರ ಕರ್ಮಗಳೆಲ್ಲ ಲಕ್ಷ್ಮೀ । ಪತಿಗೆ ಪೂಜೆಗಳೆಂದು ಸ್ಮರಿಸುತ । ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲೀ ॥ ೨೫ ॥

ಭೂತಳಾಧಿಪನಾಜ್ಞಧಾರಕ । ದೂತರಿಗೆ ಸೇವಾನುಸಾರದಿ । ವೇತನವ ಕೊಟ್ಟವರ ಸಂತೋಷಿಸುವ ತೆರದಂತೆ ॥ ಮಾತರಿಶ್ವಪ್ರಿಯನು ಪರಮ । ಪ್ರೀತಿಪೂರ್ವಕ ಸದ್ಗುಣಂಗಳ । ಗಾಥಕರ ಸಂತೋಷಬಡಿಸುವನಿಹಪರಂಗಳಲಿ ॥ ೨೬ ॥

ದೀಪ ದಿವದಲಿ ಕಂಡರಾದಡೆ । ಲೋಪಗೈಸುವರಾಕ್ಷಣ ಹರಿ ಸ- । ಮೀಪದಲ್ಲಿರೆ ನಂದನಾಮ ಸುನಂದವೆನಿಸುವವು ॥ ಔಪಚಾರಿಕವಲ್ಲ ಸುಜನರ । ಪಾಪಕರ್ಮವು ಪುಣ್ಯವೆನಿಪುದು । ಪಾಪಿಗಳ ಸತ್ಪುಣ್ಯಕರ್ಮವು ಪಾಪವೆನಿಸುವುದು ॥ ೨೭ ॥

ಧನವ ಸಂಪಾದಿಸುವ ಪ್ರದ್ಯಾ- । ವಣಿಕರಂದದಿ ಕೋವಿದರ ಮನೆ । ಮನೆಗಳಲಿ ಸಂಚರಿಸು ಶಾಸ್ತ್ರಶ್ರವಣಗೋಸುಗದೀ ॥ ಮನನಗೈ ಮುಪದೇಶಿಸುತ ದು- । ರ್ಜನರ ಕೂಡಾಡದಿರು ಸ್ವಪ್ನದಿ । ಪ್ರಣತಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ ॥ ೨೮ ॥

ಕಾರಕಕ್ರಿಯ ದ್ರವ್ಯವಿಭ್ರಮ । ಮೂರುವಿಧಜೀವರಿಗೆ ಬಹು ಸಂ- । ಸಾರಕಿವು ಕಾರಣವೆನಿಸುವವು ಯೆಲ್ಲ ಕಾಲದಲೀ ॥ ದೂರ ಓಡಿಸಿ ಭ್ರಾಮಕತ್ರಯ । ಮೂರಿಗೊಳಗಾಗದಲೆ ಸರ್ವಾ- । ಧಾರಕನ ಚಿಂತಿಸುತಲಿರು ಸರ್ವತ್ರ ಮರೆಯದಲೆ ॥ ೨೯ ॥

ಕರಣಕರ್ಮವ ಮಾಡಿದರೆ ವಿ- । ಸ್ಮರಣೆಕಾಲದಿ ಮಾತುಗಳಿಗು- । ತ್ತರವ ಕೊಡದಲೆ ಸುಮ್ಮನಿಪ್ಪರು ಜಾಗರಾವಸ್ಥೆ ॥ ಕರುಣಿಸಲು ವ್ಯಾಪಾರ ಮಾಡುವ । ಬರಲು ನಾಲಕವಸ್ಥೆಗಳ ಪರಿ । ಹರಿಸಿಕೊಳನೇತಕೆ ಸ್ವತಂತ್ರನು ತಾನೆ ಯೆಂಬುವನು ॥ ೩೦ ॥

ಯುಕ್ತಿಮಾತುಗಳಲ್ಲ ಶ್ರುತಿಸ್ಮೃ- । ತ್ಯುಕ್ತಮಾತುಗಳಿವು ವಿಚಾರಿಸೆ । ಮುಕ್ತಿಗಿವು ಸೋಪಾನವೆನಿಪವು ಪ್ರತಿಪ್ರತೀಪದವು ॥ ಭಕ್ತಿಪೂರ್ವಕ ಪಠಿಸುವವರಿಗೆ । ವ್ಯಕ್ತಿಕೊಡುವ ಸ್ವರೂಪಸುಖ ಪ್ರವಿ- । ವಿಕ್ತರನ ಮಾಡುವನು ಭವಭಯದಿಂದ ಬಹುರೂಪ ॥ ೩೧ ॥

ಶ್ರೀನಿವಾಸನ ಸುಗುಣಮಣಿಗಳ । ಪ್ರಾಣಮತ ವಯನಾಖ್ಯ ಸೂತ್ರದೆ । ಪೋಣಿಸಿದ ಮಾಲಿಕೆಯು ವಾಙ್ಮಯನಂಸಗರ್ಪಿಸಿದಾ ॥ ಜ್ಞಾನಿಗಳ ದೃಗ್ವಿಷಯವಹುದ- । ಜ್ಞಾನಿಗಳಿಗೆ ಅಸಹ್ಯ ತೋರ್ಪುದು । ಮಾಣಿಕವ ಮರ್ಕಟನ ಕೈಯಲಿ ಕೊಟ್ಟ ತೆರದಂತೆ ॥ ೩೨ ॥

ಶ್ರೀವಿಧೀರವಿಪಾಹಿವೇಶಶ- । ಚೀವರಾತ್ಮಭವಾರ್ಕಶಶಿದಿ- । ಗ್ದೇವ ಋಷಿಗಂಧರ್ವಕಿನ್ನರಸಿದ್ಧಸಾಧ್ಯಗಣಾ ॥ ಸೇವಿತಪದಾಂಭೋಜ ತತ್ಪಾ- । ದಾವಲಂಬಿಗಳಾದ ಭಕತರ । ಕಾವ ಕರುಣಾಸಾಂದ್ರ ಲಕ್ಷ್ಮೀಹೃತ್ಕುಮುದಚಂದ್ರ ॥ ೩೩ ॥

ಆದರುಶವ ಗತಾಕ್ಷ ಭಾಷಾ । ಭೇದದಿಂದಲಿ ಕರೆಯಲದನು ನಿ- । ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳೂ ॥ ಮಾಧವನ ಗುಣ ಪೇಳ್ವ ಪ್ರಾಕೃತ- । ವಾದರೆಯು ಸರಿ ಕೇಳಿ ಪರಮಾ- । ಹ್ಲಾದಬಡದಿಪ್ಪರೆ ನಿರಂತರ ಬಲ್ಲ ಕೋವಿದರೂ ॥ ೩೪ ॥

ಭಾಸ್ಕರನ ಮಂಡಲವ ಕಂಡು ಸ- । ಮಸ್ಕರಿಸಿ ಮೋದಿಸವೆ ದ್ವೇಷದಿ । ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ ॥ ಸಂಸ್ಕೃತವಿದಲ್ಲೆಂದು ಕುಹಕ ತಿ- । ರಸ್ಕರಿಸಲೇನಹುದು ಭಕ್ತಿಪು- । ರಸ್ಕರದಿ ಕೇಳ್ವರಿಗೆ ವಲಿವನು ಪುಷ್ಕರಾಕ್ಷ ಸದಾ ॥ ೩೫ ॥

ಪತಿತನ ಕಪಾಲದೊಳು ಭಾಗೀ- । ರಥಿಯ ಜಲವಿರೆ ಪೇಯವೆನಿಪುದೆ । ಇತರ ಕವಿನಿರ್ಮಿತ ಕುಕಾವ್ಯಶ್ರಾವ್ಯ ಬುಧರಿಂದಾ ॥ ಕೃತಿಪತಿ ಕಥಾನ್ವಿತವೆನಿಪ ಪ್ರಾ- । ಕೃತವೆ ತಾ ಸಂಸ್ಕೃತವೆನಿಸಿ ಸ । ದ್ಗತಿಯನೀವುದು ಭಕ್ತಿಪೂರ್ವಕ ಪೇಳಿ ಕೇಳ್ವರಿಗೆ ॥ ೩೬ ॥

ವೇದಶಾಸ್ತ್ರಸಯುಕ್ತಿಗ್ರಂಥಗ- । ಳೋದಿ ಕೇಳ್ದವನಲ್ಲ ಸಂತತ । ಸಾಧುಗಳ ಸಹವಾಸ ಸಲ್ಲಾಪಗಳು ಮೊದಲಿಲ್ಲಾ ॥ ಮೋದತೀರ್ಥಾರ್ಯರ ಮತಾನುಗ- । ರಾದವರ ಕರುಣದಲಿ ಪೇಳ್ದೆ ರ- । ಮಾಧವ ಜಗನ್ನಾಥವಿಟ್ಠಲ ತಿಳಿಸಿದದರೊಳಗೆ ॥ ೩೭ ॥

ಅಂತು ಸಂಧಿ ೧೬ಕ್ಕೆ ಪದ ೫೦೯ಕ್ಕೆ ದತ್ತಸ್ವಾತಂತ್ರ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೧೭. ಸ್ವಗತಸ್ವಾತಂತ್ರ್ಯದಾನಸಂಧಿ.

ತನ್ನಲ್ಲಿ ವಿಭಾಗಮಾಡಿ ಇಟ್ಟುಕೊಂಡು ತನ್ನಲ್ಲಿರುವ ಸ್ವಾತಂತ್ರ್ಯವನ್ನು ಬ್ರಹ್ಮಾದಿಗಳಿಗೆ ವಿಭಾಗಮಾಡಿ ಕೊಡುತ್ತಾನಾದ್ದರಿಂದ ಸ್ವಗತ ಸ್ವಾತಂತ್ರ್ಯ ದಾನವೆಂತ ಹೆಸರು. ಅದರ ಕ್ರಮವನ್ನು ಇಲ್ಲಿ ಹೇಳುತ್ತಾರೆ.

॥ ಶ್ರೀತ್ರಿವಿಕ್ರಮಾಯ ನಮಃ ॥

ರಾಗ ತೋಡಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:—** ಸ್ವಗತಸ್ವಾತಂತ್ರ್ಯ ಗುಣವ ಹರಿ । ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟುದ । ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ ॥

ಪರಮ ವಿಷ್ಣು ಸ್ವತಂತ್ರ ಮಾಯಾ । ತರುಣಿ ವಕ್ಷಸ್ಥಳನಿವಾಸಿಯು । ಸರಸಿಜೋದ್ಭವ ಪ್ರಾಣಶರ್ವರು ಸಚಿವರೆನಿಸುವರೂ ॥ ಸರುವ ಕರ್ಮಗಳಲ್ಲಿ ತತ್ಪ್ರಿಯು- । ರುರಗಭೂಷಣಹಂಕೃತಿತ್ರಯು । ಕರೆಸುವಮರೇಂದ್ರಾರ್ಕಮುಖರಿಂದ್ರಿಯಪರೆನಿಸುವರೂ ॥ ೧ ॥

ಈ ದಿವೌಕಸರಂತೆ ಕಲಿಮೊದ- । ಲಾದ ದೈತ್ಯರು ಸರ್ವದೇಹದಿ । ತೋದಕರು ತಾವಾಗಿ ವ್ಯಾಪಾರಗಳ ಮಾಡುವರೂ ॥ ವೇಧನಂದದಿ ಕಲಿಯುಹಂಕಾ- । ರಾಧಿಪಾಧಮ ಮಧುಕುಕೈಟಭ । ಕ್ರೋಧಿ ಶಂಬರ ಮುಖರು ಮನಸಿಗೆ ಸ್ವಾಮಿಯೆನಿಸುವರೂ ॥ ೨ ॥

ದೇವತೆಗಳೋಪಾದಿ ನಿತ್ಯದೊ- । ಳೀವಮಾದಿ ಸ್ವನಾಮದಿಂದಲಿ । ಯಾವದಿಂದ್ರಿಯಗಳೊಳು ವ್ಯಾಪಾರಗಳ ಮಾಡುವರೂ ॥ ಸೇವಕರ ಸೇವಾನುಗುಣ ಫಲ- । ವೀವ ನೃಪನಂದದಲಿ ತನ್ನ ಸ್ವ- । ಭಾವ ಸ್ವಾತಂತ್ರಿಯ ವಿಭಾಗವ ಮಾಡಿ ಕೊಟ್ಟ ಹರಿ ॥ ೩ ॥

ಅಗಣಿತ ಸ್ವಾತಂತ್ರ್ಯವ ನಾಲ್- । ಬಗೆ ವಿಭಾಗವ ಮಾಡಿ
ಯೊಂದನು । ತೆಗೆದು ದಶವಿಧಗೈಸಿ ಪಾದರೆ ಪಂಚಪ್ರಾಣನಲಿ ॥ ಮೊಗ
ಚತುಷ್ಟಯನೊಳು ಸಹಾದ್ಯ- । ದುಗುಣವಿರಿಸಿದ ಮತ್ತೆ ದಶವಿಧ ।
ಯುಗಳ ಗುಣವನು ಮಾಡಿ ಯೆರಡು ಸದಾಶಿವನೊಳಿಟ್ಟ ॥ ೪ ॥

ಪಾಕಶಾಸನ ಕಾಮರೊಳು ಸಾ- । ರ್ಧೈಕವಿಟ್ಟ ದಶೇಂದ್ರಿಯರ
ಸುದಿ- । ವೌಕಸಾದ್ಯರೊಳೊಂದು ಯಾವಜ್ಜೀವರೊಳಗೊಂದೂ ॥
ನಾಲ್ಕುವರೆ ಕಲ್ಯಾದಿ ದೈತ್ಯಾ- । ನೀಕಕಿತ್ತನು ಯೆರಡು ತ್ರಿವಿಧ ವಿ- ।
ವೇಕಗೈಸಿಂದಿರೆಗೆ ಒಂದೆರಡಾತ್ಮ ತನ್ನೊಳಗೆ ॥ ೫ ॥

ಈವಿಧದಿ ಸ್ವಾತಂತ್ರ್ಯ ತತ್ವವ । ದೇವಮಾನವ ದಾನವರೊಳು
ರ- । ಮಾವಿನೋದಿ ವಿಭಾಗ ಮಾಡಿಟ್ಟಲ್ಲೆ ರಮಿಸುವನೂ ॥ ಮೂವರೊ
ಳಗಿದ್ದವರ ಕರ್ಮವ । ತಾ ವಿಕಾರವ ಗೈಸದಲೆ ಕ- । ಲ್ಪಾವಸಾನಕೆ
ಕೊಡುವನಾಯಾಸವರವರ ಗತಿಯಾ ॥ ೬ ॥

ಆಲಯಗಳೊಳಗಿಪ್ಪ ದೀಪ । ಜ್ವಾಲೆವರ್ತಿಗಳನುಸರಿಸಿ ಜನ- ।
ರಾಲಿಗಳಿಗೊಪ್ಪುವ ತೆರದಿ ಹರಿ ತೋರ್ಪ ಸರ್ವತ್ರ ॥ ಕಾಲಕಾಲದಿ
ಶ್ರೀಧರಾ ದು- । ರ್ಗಾಲಲನೆಯರ ಕೂಡಿ ಸುಖಮಯ । ಲೀಲೆಗೈಯಲು
ತ್ರಿಗುಣ ಕಾರ್ಯಗಳಹವು ಜೀವರಿಗೆ ॥ ೭ ॥

ಇಂದ್ರಿಯಗಳಿಂ ಮಾಳ್ಪ ಕರ್ಮ । ದ್ವಂದ್ವಗಳ ತನಗರ್ಪಿಸಲು
ಗೋ- । ವಿಂದ ಪುಣ್ಯವ ಕೊಂಡು ಪಾಪವ ಭಸ್ಮವನೆ ಮಾಳ್ಪ ॥ ಇಂದಿ
ರೇಶನು ಭಕ್ತಜನರನು । ನಿಂದಿಸುವರೊಳಗಿಪ್ಪ ಪುಣ್ಯವ । ತಂದು ತನ್ನ
ವಗೀವ ಪಾಪಗಳವರಿಗುಣಿಸುವನು ॥ ೮ ॥

ಹೊತ್ತು ಹೊತ್ತಿಗೆ ಪಾಪಕರ್ಮ ಪ್ರ- । ವರ್ತಕರ ನಿಂದಿಸದೆ
ತನಗಿಂ- । ದುತ್ತಮರ ಗುಣಕರ್ಮಗಳ ಕೊಂಡಾಡದಲೆ ಯಿಪ್ಪಾ ॥
ಮರ್ತ್ಯರಿಗೆ ಗೋ ಬ್ರಾಹ್ಮಣ ಸ್ತ್ರೀ- । ಹತ್ಯ ಮೊದಲಾದಖಿಳ ದೋಷಗ- ।
ಳಿತ್ತಪನು ಸಂದೇಹ ಬಡಸಲ್ಲಖಿಳ ಶಾಸ್ತ್ರಮತ ॥ ೯ ॥

ತನ್ನ ಸ್ವಾತಂತ್ರ್ಯ ಗುಣಗಳ ಹಿ- । ರಣ್ಯಗರ್ಭಾದ್ಯರಿಗೆ ಕಲಿ ಮುಖ । ದಾನವರ ಸಂತತಿಗೆಯುವರಧಿಕಾರವನುಸರಿಸೀ ॥ ಪುಣ್ಯಪಾಪ ಗಳೀವ ಬಹು ಕಾ- । ರುಣ್ಯಸಾಗರನಲ್ಪಶಕ್ತಿಗ- । ಳುಣ್ಣಲರಿಯುದೆ ಇರಲು ಉಣಗಲಿಸಿದನು ಸರ್ವರಿಗೆ ॥ ೧೦ ॥

ಸತ್ಯವಿಕ್ರಮ ಪುಣ್ಯಪಾಪ ಸ- । ಮಸ್ತರಿಗೆ ಕೊಡಲೋಸುಗದಿ ನಾ- । ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ॥ ಅತ್ಯಲುಪ ಪರಮಾಣುವಿಗೆ ಸಾ- । ಮರ್ಥ್ಯವನು ತಾ ಕೊಟ್ಟು ಸ್ಥೂಲಪ- । ದಾರ್ಥ ಗಳನುಂಡುಣಿಪ ಸರ್ವದ ಸರ್ವಜೀವರಿಗೆ ॥ ೧೧ ॥

ತಿಮಿರ ತರಣಿಗಳೇಕದೇಶದಿ । ಸಮನಿಸಿಪ್ಪವೆ ಯೆಂದಿಗಾದರು । ಭ್ರಮಣ ಛಳಿಬಿಸಿಲಂಜಿಕಗಳುಂಟೇನೊ ಸರ್ವತಕೆ ॥ ಅಮಿತಜೀವರೊ ಳಿದ್ದು ಲಕುಮಿಾ- । ರಮಣ ವ್ಯಾಪಾರಗಳ ಮಾಡುವ । ಕಮಲಪತ್ರ ಸರೋವರಗಳೊಳಗಿಪ್ಪ ತೆರನಂತೆ ॥ ೧೨ ॥

ಅಂಬುಜೋದ್ಭವ ಮುಖ್ಯ ಸುರ ಕಲಿ । ಶಂಬರಾದಿ ಸಮಸ್ತ ದೈತ್ಯಕ- । ದಂಬಕನುದಿನ ಪುಣ್ಯಪಾಪ ವಿಭಾಗವನೆ ಮಾಡಿ ॥ ಅಂಬು ಧಿಯ ಜಲವನು ಮಹಾಘಟ । ಬಿಂಬರಿತು ತುಂಬುವ ತೆರದಿ ಪ್ರತಿ । ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲವೀವ ॥ ೧೩ ॥

ಇನಿತು ವಿಷ್ಣುರಹಸ್ಯದೊಳ್ ಭೃಗು- । ಮುನಿಪನಿಂದ್ರದ್ಯುಮ್ನ ಗರುಪಿದು- । ದನು ಬುಧರು ಕೇಳುವದು ನಿತ್ಯದಿ ಮತ್ಸರವ ಬಿಟ್ಟು ॥ ಅನುಚಿತೋಕ್ತಿಗಳಿದ್ದರೆಯು ಸರಿ । ಗಣನೆ ಮಾಡದಿರೆಂದು ವಿದ್ವ- । ಜ್ಜನಕೆ ವಿಜ್ಞಾಪನೆಯ ಮಾಡುವೆ ವಿನಯಪೂರ್ವಕದಿ ॥ ೧೪ ॥

ವೀತಭಯ ವಿಶ್ವೇಶ ವಿಧಿಪಿತ । ಮಾತುಳಾಂತಕ ಮಧ್ವವಲ್ಲಭ । ಭೂತಭಾವನನಂತಭಾಸ್ಕರತೇಜ ಮಹರಾಜಾ ॥ ಗೌತಮರ ಮಡ ದಿಯನು ಕಾಯ್ದಾ- । ನಾಥರಕ್ಷಕ ಗುರುತಮ ಜಗ- । ನ್ನಾಥವಿಟ್ಠಲ ತನ್ನ ನಂಬಿದ ಭಕತರನೆ ಪೊರೆವ ॥ ೧೫ ॥

ಅಂತು ಸಂಧಿ ೧೭ಕ್ಕೆ ಪದ ೫೨೪ಕ್ಕೆ ಸ್ವಗತಸ್ವಾತಂತ್ರ್ಯದಾನಸಂಧಿ ಸಮಾಪ್ತ.

# ೧೮. ಕ್ರೀಡಾವಿಲಾಸಸಂಧಿ.

## (ಸರ್ವಸ್ವಾತಂತ್ರ್ಯಸಂಧಿ.)

ಶ್ರೀಪರಮಾತ್ಮನು ಜೀವರ ಕರ್ಮ ತಿಳಿಯಲಿಕ್ಕೆ ಸ್ವಾತಂತ್ರ್ಯ ರೂಪದಿಂದ ಜೀವರಲ್ಲಿ ನಿಂತು ತಾನೇ ಕರ್ಮಮಾಡಿ ಮಾಡಿಸುತ್ತಾನೆಂತಲೂ, ಪರಮಾತ್ಮನು ಸರ್ವಸ್ವತಂತ್ರನೆಂತಲೂ, ಜೀವನು (ಬ್ರಹ್ಮಾದಿ ತೃಣಪರ್ಯಂತ) ಪರಾಧೀನನೆಂತಲೂ ಈ ಸಂಧಿಯಲ್ಲಿ ಹೇಳುತ್ತಾರೆ.

॥ ಶ್ರೀಜಗಜ್ಜನ್ಮಾದಿಕಾರಣಾಯ ನಮಃ ॥

ರಾಗ ಶಂಕರಾಭರಣ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:**—ಶ್ರೀನಿವಾಸನ ಚರಿತೆಗಳ ಪರ- । ಮಾನುರಾಗದಿ ಬೆಸಗೊಳಲು ಮುನಿ । ಶೌನಕಾದ್ಯರಿಗರುಹಿದನು ಸೂತಾರ್ಯ ದಯದಿಂದಾ ॥

ಪಚನ ಭಕ್ಷಣ ಗಮನ ಭೋಜನ । ವಚನ ಮೈಥುನ ಶಯನ ವೀಕ್ಷಣ । ಅಚಲನಾಚಲನ ಪ್ರಯತ್ನವು ಸಾಧ್ಯವೇ ಜನಕೆ ॥ ಶುಚಿಪದನ ದಯದಿಂದೆ ಜೀವರ । ನಿಚಯದೊಳು ತಾ ನಿಂತು ಮಾಡುವ । ಉಚಿತನೋಚಿತ ಕರ್ಮಗಳನೆಂದರಿದು ಕೊಂಡಾಡೂ ॥ ೧ ॥

ವಿಷ್ಟರಶ್ರವ ದೇಹದೊಳಗೆ ಪ್ರ- । ವಿಷ್ಟನಾಗಿ ನಿರಂತರದಿ ಬಹು । ಚೇಷ್ಟೆಗಳ ಮಾಡುತಿರೆ ಕಂಡು ಸಜೀವವೆನುತಿಹರೂ ॥ ಹೃಷ್ಟರಾಗುವರವರ ನೋಡಿ ಕ- । ನಿಷ್ಠರೆಲ್ಲರು ಸೇವೆ ಮಾಳ್ಪರು । ಬಿಟ್ಟ ಕ್ಷಣದಲಿ ಕುಣಪವೆಂದರಿದದನುಪೇಕ್ಷಿಪರು ॥ ೨ ॥

ಕ್ರೀಡೆಗೋಸುಗ ಅವರವರ ಗತಿ । ನೀಡಲೋಸುಗ ದೇಹಗಳ ಕೊ- । ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮಾದ್ಯರೊಳು ಪ್ರೊಕ್ಷ್ಯಾ ॥ ಮಾಡುವನು ವ್ಯಾಪಾರ ಬಹು ವಿಧ । ಮೂಢದೈತ್ಯರೊಳಿದ್ದು ಪ್ರತಿದಿನ । ಕೇಡು ಲಾಭಗಳಿಲ್ಲವಿದರಿಂದಾವ ಕಾಲವಲೀ ॥ ೩ ॥

ಅಕ್ಷರೇಡ್ಯನು ಬ್ರಹ್ಮ ವಾಯು । ತ್ರ್ಯಕ್ಷಸುರಪ ಸುರಾಸುರಗಳ- । ಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹಾ ॥ ಅಕ್ಷಯನು ಸತ್ಯಾತ್ಮಕ ಪರಾ- । ಪೇಕ್ಷೆಯಿಲ್ಲದೆ ಸರ್ವರೊಳಗೆ ವಿ- । ಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪಾ ॥ ೪ ॥

ಶ್ರೀಸರಸ್ವತಿ ಭಾರತೀಗಿರಿ- । ಜಾ ಶಚೀ ರತಿ ರೋಹಿಣೀ ಸಂ- । ಜ್ಞಾ ಶತರೂಪಾದ್ಯಖಿಳ ಸ್ತ್ರೀಯರೊಳು ಸ್ತ್ರೀರೂಪಾ ॥ ವಾಸವಾಗಿದ್ದೆಲ್ಲರಿಗೆ ವಿ- । ಶ್ವಾಸ ತನ್ನಲಿ ಕೊಟ್ಟು ಅವರಭಿ- । ಲಾಷೆಗಳ ಪೂರೈಸುತಿಪ್ಪನು ಯೋಗ್ಯತೆಗಳರಿತೂ ॥ ೫ ॥

ಕೋಲುಕುದುರೆಯು ಮಾಡಿ ಆಡುವ । ಬಾಲಕರ ತೆರನಂತ ಲಕ್ಷ್ಮೀ- । ಲೋಲ ಸ್ವಾತಂತ್ರ್ಯಗುಣವ ಬ್ರಹ್ಮಾದ್ಯರೊಳಗಿಟ್ಟು ॥ ಲೀಲೆಗೈವನು ತನ್ನವರಿಗನು- । ಕೂಲನಾಗಿದ್ದೆಲ್ಲ ಕಾಲದಿ । ಖೂಳರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ॥ ೬ ॥

ಸೌಪರಣಿವರವಹನ ನಾನಾ । ರೂಪನಾಮದಿ ಕರೆಸುತವರ ಸ- । ಮೀಪದಲ್ಲಿರ್ದಖಿಳ ವ್ಯಾಪಾರವನು ಮಾಡುವನು ॥ ಪಾಪಪುಣ್ಯಗಳೆರಡು ಅವರ ಸ್ವ- । ರೂಪಗಳನನುಸರಿಸಿಯುಣಿಸ ಪ- । ರೋಪಕಾರಿ ಪರೇಶ ಪೂರ್ಣಾನಂದ ಜ್ಞಾನಘನಾ ॥ ೭ ॥

ಆಹರನಿದ್ರಾ ಮೈಥುನಗಳಹ- । ರಹರ ಬಯಸಿ ಬಳಲುವ ಲಕ್ಷ್ಮೀ । ಮಹಿತನ ಮಹಾಮಹಿಮೆಗಳನೆಂತರಿವ ನಿತ್ಯದಲೀ ॥ ಅಹಿಕ ಸೌಖ್ಯವ ಮರೆದು ಮನದಲಿ । ವಹಿಸಿ ಶಾಸ್ತ್ರಾರ್ಥಗಳ ಪರಮೋ- । ತ್ಸಹದಿ ಕೊಂಡಾಡುತಲೆ ಮೈಮರೆದವರಿಗಲ್ಲದಲೆ ॥ ೮ ॥

ಬಂಧಮೋಕ್ಷಪ್ರದನ ಜ್ಞಾನವು । ಮಂದಮತಿಗಳಿಗೆಂತು ದೊರೆ
ವದು । ಬಿಂದುಮಾತ್ರ ಸುಖಾನುಭವ ಪರ್ವತಕೆ ಸಮ ದುಃಖ ॥
ಎಂದು ತಿಳಿಯದಲನ್ಯದೈವಗ- । ಳಿಂದ ಸುಖವನಪೇಕ್ಷಿಸುವರು ಮು- ।
ಕುಂದನಾರಾಧನೆಯ ಬಿಟ್ಟವಗುಂಟೆ ಮುಕ್ತಿಸುಖ ॥ ೯ ॥

ರಾಜ ತನ್ನಾಮಾತ್ಯಕರುಣದಿ । ಸ್ವಜನರಿಗೆ ಕೊಟ್ಟ ಕಾರ್ಯ
ಸಿ- । ಯೋಜಿಸುತ ಮಾನಾಪಮಾನವ ಮಾಳ್ಪ ತೆರನಂತೆ ॥ ಶ್ರೀಜನಾ
ರ್ದನ ಸಕಲರೊಳಗಪ- । ರಾಜಿತನು ತಾನಾಗಿ ಸರ್ವ ಪ್ರ- । ಯೋಜ
ನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ ॥ ೧೦ ॥

ವಾಸುದೇವ ಸ್ವತಂತ್ರವ ಸರೋ- । ಜಾಸನಾದ್ಯಮರಾಸುರರಿ
ಗಿಯು- । ಲೋಸುಗರ್ಧವ ತೆಗೆದದರೊಳರ್ಧವ ಚತುರ್ಭಾಗ । ಗೈಸಿ
ಯೊಂದನು ಶತವಿಧ ದ್ವಿಪಂ- । ಚಾಶತಾಬ್ಜಜಗಷ್ಟಚತ್ವಾ- । ರಿಂಶದನಿ
ಲನಿಗಿತ್ತು ವಾಣೀ ಭಾರತೀಗರ್ಧ ॥ ೧೧ ॥

ದ್ವಿತಿಯ ಪಾದವ ತೆಗೆದು ಕೊಂಡಜ । ಶತವಿಭಾಗವ ಮಾಡಿ
ತಾ ವಿಂ- । ಶತಿಯುಮೇಶನೊಳಿಟ್ಟು ಯಿಂದ್ರನೊಳೈದಧಿಕ ಹತ್ತು ॥ ರತಿ
ಪನೊಳಗಿನಿತಿಟ್ಟಖಿಳ ದೇ- । ವತೆಗಳೊಳಗೀರೈದು ಜೀವ । ಪ್ರತತಿಯೊಳು
ದಶವೈದಧಿಕ ನಾಲ್ವತ್ತು ದೈತ್ಯರೊಳು ॥ ೧೨ ॥

ಕಾರುಣಿಕ ಸ್ವಾತಂತ್ರ್ಯತ್ವವ । ಮೂರುವಿಧಗೈಸೆರಡು ತನ್ನೊಳು ।
ನಾರಿಗೊಂದನು ಕೊಟ್ಟ ಸ್ವಾತಂತ್ರ್ಯವ ಸರ್ವರಿಗೆ ॥ ಧಾರುಣಿಪ ತನ್ನ
ನುಗರಿಗೆ ವ್ಯಾ- । ಪಾರ ಕೊಟ್ಟು ಗುಣಾಗುಣಗಳ ವಿ- । ಚಾರಮಾಡುವ
ತೆರದಿ ತ್ರಿಗುಣ ವ್ಯಕ್ತಿಯನೆ ಮಾಳ್ಪ ॥ ೧೩ ॥

ಪುಣ್ಯಕರ್ಮಕೆ ಸಹಯುವಾಗುವ । ಧನ್ಯರಿಗೆ ಕಲ್ಯಾದಿದೈತ್ಯರ ।
ಪುಣ್ಯಫಲಗಳನೀವ ದಿವಿಜರ ಪಾಪಕರ್ಮಫಲಾ ॥ ಅನ್ಯಕರ್ಮವ
ಮಾಳ್ಪರಿಗೆ ಅನು- । ಗುಣ್ಯ ಜನರಿಗೆ ಕೊಡುವ ಬಹು ಕಾ- । ರುಣ್ಯಸಾ
ಗರನೀತೆರದಿ ಭಕ್ತರನು ಸಂತೈಪ ॥ ೧೪ ॥

ನಿರುಪಮಗೆ ಸರಿಯುಂಟು ಯೆಂದು- । ಚ್ಚರಿಸುವವ ತದ್ಭಕ್ತರೊಳು ಮ- । ತ್ಸರಿಸುವವ ಗುಣಗುಣಿಗಳಿಗೆ ಭೇದಗಳ ಪೇಳುವವ ॥ ದರಸುದರ್ಶನ ವೂರ್ಧ್ವ್ವಪುಂಡ್ರವ । ಧರಿಸಿದವರೊಳು ದ್ವೇಷಿಸುವ ಹರಿ । ಚರಿತೆಗಳ ಕೇಳದಲೆ ಲೋಗರ ವಾರ್ತೆ ಕೇಳುವವ ॥ ೧೫ ॥

ಏವಮಾದಿ ದ್ವೇಷವುಳ್ಳ ಕು- । ಜೀವರೆಲ್ಲರು ದೈತ್ಯರೆಂಬರು । ಕೋವಿದರ ವಿಜ್ಞಾನಕರ್ಮವ ನೋಡಿ ನಿಂದಿಪರು ॥ ದೇವದೇವನ ಬಿಟ್ಟುಯಾವ- । ಜ್ಜೀವ ಪರಿಯಂತರದಿ ತುಚ್ಛರ । ಸೇವೆಯಿಂದುಪಜೀವಿಸುವರಜ್ಞಾನಕೊಳಗಾಗಿ ॥ ೧೬ ॥

ಕಾಮಲೋಭಕ್ರೋಧಮದ ಹಿಂ- । ಸಾಮಯಾನೃತದಂಭಕಪಟತ್ರಿ- । ಧಾಮನವತಾರಗಳ ಭೇದವ ಪೂರ್ಣಸುಖ ಬದ್ಧಾ ॥ ಆಮಿಷನಿವೇದಿತವ ಭೋಜ್ಯತಿ- । ತಾಮಸಾನ್ನವನುಂಬ ತಾಮಸ । ಶ್ರೀಮದಾಂಧರ ಸಂಗದಿಂದಲಿ ತಮವೆ ವರ್ಧಿಪುದು ॥ ೧೭ ॥

ಜ್ಞಾನಭಕುತಿ ವಿರಕ್ತಿ ವಿನಯ ಪು- । ರಾಣಶಾಸ್ತ್ರಶ್ರವಣಚಿಂತನ । ದಾನಶಮದಮಯಜ್ಞಸತ್ಯಾಹಿಂಸಭೂತದಯಾ ॥ ಧ್ಯಾನ ಭಗವನ್ನಾಮಕೀರ್ತನ । ಮೌನಜಪ ತಪವ್ರತ ಸುತೀರ್ಥ- । ಸ್ನಾನಮಂತ್ರಸ್ತೋತ್ರವಂದನ ಸಜ್ಜನರ ಗುಣವೂ ॥ ೧೮ ॥

ಲೇಶಸ್ವಾತಂತ್ರ್ಯಗುಣವನು ಪ್ರ- । ವೇಶಗೈಸಿದ ಕಾರಣದಿ ಗುಣ । ದೋಷಗಳು ತೋರುವವು ಸತ್ವಾಸತ್ವಜೀವರೊಳು ॥ ಶ್ವಾಸಭೋಜನ ಪಾನ ಶಯನ ವಿ- । ಲಾಸ ಮೈಥುನ ಗಮನ ಹರುಷ । ಕ್ಲೇಶ ಸ್ವಪ್ನ ಸುಷುಪ್ತಿ ಜಾಗ್ರತೆಯುಹವು ಚೇತನಕೆ ॥ ೧೯ ॥

ಅರ್ಧ ತನ್ನೊಳಗಿರಿಸಿ ವುಳಿದೊಂ- । ದರ್ಧವ ವಿಭಾಗಿಸುತಲಾವೃಜಿ- । ನಾರ್ದನನು ಪೂರ್ವದಲಿ ಸ್ವಾತಂತ್ರ್ಯವ ಕೊಟ್ಟಂತೆ ॥ ಸ್ವರ್ಧುನೀಪಿತ ಕೊಡುವವರ ಸುಖ । ವೃದ್ಧಿಗೋಸುಗ ಬ್ರಹ್ಮವಾಯುಃಕ- । ಪರ್ದಿ ಮೊದಲಾದವರೊಳಿರ್ದವ ಯೋಗ್ಯತೆಯನರಿತು ॥ ೨೦ ॥

ಹಲಧರಾನುಜ ಮಾಳ್ಪ ಕೃತ್ಯವ । ತಿಳಿಯದಾಹಂಕಾರದಿಂದೆ- ।
ನ್ನುಳಿದು ವಿಧಿಯು ನಿಷೇಧ ಪಾತ್ರರು ಯಿಲ್ಲವೆಂಬವಗೆ ॥ ಫಲಗಳ ದ್ವಯ
ಕೊಡುವ ದೈತ್ಯರ । ಕಲುಷ ಕರ್ಮವ ಬಿಟ್ಟು ಪುಣ್ಯವ । ಸೆಳೆದು ತನ್ನೊ
ಳಗಿಟ್ಟು ಕ್ರಮದಿಂ ಕೊಡುವ ಭಕ್ತರಿಗೆ ॥ ೨೧ ॥

ತೋಯಜಾಪ್ತನ ಕಿರಣ ವೃಕ್ಷ- । ಚ್ಛಾಯ ವರ್ತಿಸುವಂತೆ ಕಮ
ಲದ- । ಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ ॥ ಹೇಯ
ಸದ್ಗುಣ ಕರ್ಮ ತೋರ್ಪವು । ನ್ಯಾಯ ಕೋವಿದರಿಗೆ ನಿರಂತರ । ಶ್ರೇಯ
ರಸ ಸರ್ವೋತ್ತಮೋತ್ತಮನೆಂದು ಪೇಳುವರು ॥ ೨೨ ॥

ಮೂಲಕಾರಣ ಪ್ರಕೃತಿಯೆನಿಪ ಮ- । ಹಾಲಕುಮಿ ಯೆಲ್ಲರೊಳ
ಗಿರ್ದು ಸ- । ಲೀಲೆ ಗೈಯುತ ಪುಣ್ಯಪಾಪಗಳರ್ಪಿಸಲು ಪತಿಗೆ ॥ ಪಾಲ
ಗಡಲೊಳು ಬಿದ್ದ ಜಲಕೀ- । ಲಾಲವೆನಿಪುದೆ ಜೀವಕೃತ ಕ- । ರ್ಮಾಳಿ
ತದ್ವತು ಶುಭವೆನಿಪುದದುವೆಲ್ಲಕಾಲದಲಿ ॥ ೨೩ ॥

ಜ್ಞಾನಸುಖಬಲಪೂರ್ಣ ವಿಷ್ಣುವಿ- । ಗೇನ ಮಾಳ್ಪವು ತ್ರಿಗುಣ
ಕಾರ್ಯ ಕೃ- । ಶಾನುವಿನ ಕ್ರಿಮಿ ಕವಿದು ಭಕ್ಷಿಪುದುಂಟೆ ಲೋಕದೊಳು ॥
ಈ ನಳಿನಜಾಂಡವನು ಬ್ರಹ್ಮೇ- । ಶಾನಮುಖ್ಯ ಸುರಾಸುರರ ಕಾ- ।
ಲಾನಲನವೋಲ್ನುಂಗುವವಗೀ ಪಾಪಗಳ ಭಯವೆ ॥ ೨೪ ॥

ಮೋದಶಿರ ದಕ್ಷಿಣಪಕ್ಷಪ್ರ- । ಮೋದವುತ್ತರಪಕ್ಷವೆಂದು ಋು- ।
ಗಾದಿಶ್ರುತಿಗಳು ಪೇಳುವವು ಆನಂದಮಯ ಹರಿಗೆ ॥ ಮೋದವೈಷಿಕ
ಸುಖ ವಿಶೇಷ ಪ್ರ- । ಮೋದ ಪಾರತ್ರಿಕ ಸುಖ ಪ್ರದ- । ನಾದ ಕಾರಣ
ದಿಂದ ಮೋದ ಪ್ರಮೋದವೆನಿಸುವನು ॥ ೨೫ ॥

ಎಂದಿಗಾದರು ವೃಷ್ಟಿಯಿಂದ ವ- । ಸುಂಧರೆಯೊಳಿಪ್ಪಖಿಳ ಜಲದಿಂ ।
ಸಿಂಧುವೃದ್ಧಿಯನ್ನೈದಪುದೆ ಬಾರದಿರೆ ಬರಿದಹುದೆ ॥ ಕುಂದುಕೊರತೆಗ
ಳಿಲ್ಲದಿಹ ಸ್ವಾ- । ನಂದಸಂಪೂರ್ಣಸ್ವಭಾವಗೆ । ಬಂದು ಮಾಡುವದೇನು
ಕರ್ಮಾಕರ್ಮಜನ್ಯಫಲ ॥ ೨೬ ॥

ದೇಹವೃಕ್ಷದೊಳೆರಡು ಪಕ್ಷಿಗ- । ಳಿಹವುಯೆಂದಿಗು ಬಿಡದೆ ಪರಮ । ಸ್ನೇಹದಿಂದಲಿ ಕರ್ಮಜ ಫಲಗಳುಂಬ ಜೀವಖಗ ॥ ಶ್ರೀಹರಿಯು ತಾ ಸಾರಭೋಕ್ತನು । ದ್ರೋಹಿಸುವ ಕಲ್ಯಾದಿ ದೈತ್ಯಸ- । ಮೂಹಕೀವ ವಿಶಿಷ್ಟ ಪಾಪಕ್ಲೇಶವೆಲ್ಲರಿಗೆ ॥ ೨೭ ॥

ದ್ಯುಮಣಿಕಿರಣವ ಕಂಡ ಮಾತ್ರದಿ । ತಿಮಿರವೋಡುವ ತೆರದಿ ಲಕ್ಷ್ಮೀ । ರಮಣ ನೋಡಿದ ಮಾತ್ರದಿಂದಘನಾಶವೈದುವುದು ॥ ಕಮಲಸಂಭವ ಮುಖ್ಯ ಯೆಲ್ಲಾ । ಸುಮನಸರೊಳಿಹ ಪಾಪರಾಶಿಯ- । ನಮರಮುಖನಂದದಲಿ ಭಸ್ಮವ ಮಾಳ್ಪ ಹರಿ ತಾನು ॥ ೨೮ ॥

ಚತುರಶತಭಾಗದಿ ದಶಾಂಶದೊ- । ಳಿತರಜೀವರಿಗೀವ ಲೇಶವ । ದಿತಿಜದೇವರ್ಕಳಿಗೆ ಕೊಡುವ ವಿಶಿಷ್ಟ ದುಃಖ ಸುಖಾ ॥ ಮತಿವಿಹೀನ ಪ್ರಾಣಿಗಳಿಗಾ- । ಹುತಿಯ ಸುಖವ್ಯತಿದುಃಖವರ ಯೋ- । ಗ್ಯತೆಯನರಿತು ಸಿಸೀಲ ನುರಕಾದಿಗಳಿಗೀವ ಹರಿ ॥ ೨೯ ॥

ನಿತ್ಯನಿರಯಾಂಧಾಖ್ಯಕೂಪದಿ । ಭೃತ್ಯರಿಂದೊಡಗೂಡಿ ಪುನರಾ- । ವರ್ತಿವರ್ಜಿತಲೋಕವೈದುವ ಕಲಿಯು ದ್ವೇಷದಲಿ ॥ ಸತ್ಯಲೋಕಾಧಿಪ ಚತುರ್ಮುಖ । ತತ್ವದೇವರ್ಕಳ ಸಹಿತ ನಿಜ । ಮುಕ್ತಿಯೈದುವ ಹರಿ ಪದಾಬ್ಜವ ಭಜಿಸೆ ಭಕುತಿಯಲಿ ॥ ೩೦ ॥

ವಿಧಿನಿಷೇಧಗಳೆರಡು ಮರೆಯದೆ । ಮಧುವಿರೋಧಿಯ ಪಾದಕರ್ಪಿಸ- । ಲದಿತಿಮಕ್ಕಳಿಗೀವ ಪುಣ್ಯವ ಪಾಪ ದೈತ್ಯರಿಗೆ ॥ ಸುದರುಶನಧರಗೀಯದಿರೆ ಬಂ- । ದೊದಗಿ ವೊಯ್ವರು ಪುಣ್ಯ ದೈತ್ಯರು । ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ॥ ೩೧ ॥

ತಿಲಜಕಶ್ಮಲ ತ್ಯಜಿಸಿ ದೀಪವು । ತಿಳಿಯ ತೈಲವ ಗ್ರಹಿಸಿ ಮಂದಿರ- । ದೊಳಗೆ ವ್ಯಾಪಿಸಿ ಯಿಪ್ಪ ಕತ್ತಲೆ ಭಂಗಿಸುವ ತೆರದಿ ॥ ಕಲಿಮೊದಲುಗೊಂಡಖಿಳ ದಾನವ । ಕುಲಜರನುದಿನ ಮಾಳ್ಪ ಪುಣ್ಯಜ । ಫಲವ ಬ್ರಹ್ಮಾದ್ಯರಿಗೆ ಕೊಟ್ಟಲ್ಲಲ್ಲಿ ರಮಿಸುವನು ॥ ೩೨ ॥

ಇದ್ದಲೆಯು ನಿತ್ಯದಲಿ ಮೇಧ್ಯಾ- । ಮೇಧ್ಯವಸ್ತುಗಳುಂಡುಲೋ ಕದಿ । ಶುದ್ಧಶುಚಿಯೆಂದೆನಿಸಿಕೊಂಬನು ವೇದಸ್ಮೃತಿಗಳೊಳು ॥ ಬುದ್ಧಿ ಪೂರ್ವಕವಾಗಿ ವಿಬುಧರು । ಶ್ರದ್ಧೆಯಿಂದರ್ಪಿಸಿದ ಕರ್ಮನಿ- । ಷಿದ್ಧವಾ ದರು ಸರಿಯೆ ಕೈಕೊಂಡುದ್ಧರಿಸುತಿಪ್ಪ ॥ ೩೩ ॥

ಒಡೆಯರಿದ್ದ ವನಸ್ಥಫಲಗಳ । ಬಡಿದು ತಿಂಬುವರುಂಟೆ ಕಂಡರೆ । ಹೊಡೆದು ಬಿಸುಡುವರೆಂಬ ಭಯದಿಂ ನೋಡಲಂಜುವರು ॥ ಬಿಡದೆ ಮಾಡುವ ಕರ್ಮಗಳು ಮನೆ । ಮಡದಿ ಮಕ್ಕಳು ಬಂಧುಗಳು ಕಾ- । ರೊಡಲನಾಳ್ಗಳು ಯೆಂದಮಾತ್ರದಿ ಪೋಪುವವು ದುರಿತ ॥ ೩೪ ॥

ಜ್ಞಾನಕರ್ಮೇಂದ್ರಿಯಗಳಿಂದೇ- । ನೇನು ಮಾಡುವ ಕರ್ಮಗಳ ಲ- । ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲಕಾಲದಲಿ ॥ ಪ್ರಾಣಪತಿ ಕೈಕೊಂಡು ನಾನಾ । ಯೋನಿಯೈದಿಸನೊಮ್ಮೆ ಕೊಡದಿರೆ । ದಾನವರು ಸೆಳೆದೊಯ್ವರೆಲ್ಲಾ ಪುಣ್ಯರಾಶಿಗಳಾ ॥ ೩೫ ॥

ಶ್ರುತಿಯು ಸ್ಮೃತ್ಯರ್ಥವ ತಿಳಿದಹಂ- । ಮತಿವಿಶಿಷ್ಟನು ಕರ್ಮವಾ ಡಲು । ಪ್ರತಿಗ್ರಹಿಸನವ ಪಾಪಗಳ ಕೊಡುತಿಪ್ಪ ನಿತ್ಯದಲೀ ॥ ಚತುರ ದಶಭುವನಾಧಿಪತಿ ಕ್ರತು । ಕೃತಕೃತಜ್ಞನಿಯಾಮಕನು ಯೆನೆ । ಮತಿ ಯುಭ್ರಂಶಪ್ರಮಾದಸಂಕಟದೋಷವವಗಿಲ್ಲ ॥ ೩೬ ॥

ವಾರಿಜಾಸನಮುಖ್ಯರಾಜ್ಞಾ- । ಧಾರಕರು ಸರ್ವಸ್ವತಂತ್ರ ರ- । ಮಾರಮಣನೆಂದರಿದು ಇಷ್ಟಾನಿಷ್ಟ ಕರ್ಮಫಲ ॥ ಸಾರಭೋಕ್ತನಿಗರ್ಪಿ ಸಲು ಸ್ವೀ- । ಕಾರಮಾಡುವ ಪಾಪಫಲವ ಕು- । ಬೇರನಾಮಕ ದೈತ್ಯ ರಿಗೆ ಕೊಟ್ಟವರ ನೋಯಿಸುವ ॥ ೩೭ ॥

ಕ್ರೂರದೈತ್ಯರೊಳಿದ್ದು ತಾನೇ । ಪ್ರೇರಿಸುವ ಕಾರಣದಿ ಹರಿಗೆ ಕು- । ಬೇರನೆಂಬರು ಯೆಲ್ಲರೊಳು ನಿರ್ಗತಗತಿಗೆ ನಿರತಾ ॥ ಸೂರಿಗ ಮ್ಯಗೆ ಸೂರ್ಯನೆಂಬರು । ದೂರಶೋಕಗೆ ಶುಕ್ಲಲಿಂಗ ಶ- । ರೀರವಿಲ್ಲದ ಕಾರಣದಲಿ ಅಕಾಯನೆನಿಸುವನು ॥ ೩೮ ॥

ಪೇಳಲೊಶವಲ್ಲವು ಮಹಾ ಪಾ- । ವಾಳಿಗಳನೊಂದೇಕ್ಷಣದಿ ನಿ- । ರ್ಮೂಲಗೈಸಲುಬೇಕು ಎಂಬವಗೊಂದೆ ಹರಿನಾಮಾ ॥ ನಾಲಿಗೆಯೊಳುಳ್ಳವಗೆ ಪರಮಕೃ- । ಪಾಳು ಕೃಷ್ಣನು ಕೈಪಿಡಿದು ತ- । ನ್ನಾಲಯದೊಳಿಟ್ಟನುದಿನದಲಾನಂದಬಡಿಸುವನು ॥ ೩೯ ॥

ರೋಗಿಯೌಷಧಪಥ್ಯದಿಂದ ನಿ- । ರೋಗಿಯೆನಿಸುವ ತೆರದಿ ಶ್ರೀಮ- । ದ್ಭಾಗವತ ಸುಶ್ರವಣಗೈದು ಭವಾಖ್ಯರೋಗವನು ॥ ನೀಗಿ ಸರ್ವಾದ್ಯಖಿಳ ವಿಷಯ ನಿ- । ಯೋಗಿಸು ದಶೇಂದ್ರಿಯುವನಿಲನೊಳು । ಶ್ರೀಗುರು ಜಗನ್ನಾಥವಿಟ್ಠಲ ಪ್ರೀತನಾಗುವನು ॥ ೪೦ ॥

ಅಂತು ಸಂಧಿ ೧೮ಕ್ಕೆ ಪದ ೫೩೪ಕ್ಕೆ ಕ್ರೀಡಾವಿಲಾಸಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

## ೧೯. ಕರ್ಮವಿಮೋಚನಸಂಧಿ.

ಅತ್ಯಂತ ನಿಷ್ಠನಾಗಿ ಶಾಸ್ತ್ರೋಕ್ತಪ್ರಕಾರ ಕರ್ಮಮಾಡಿದಾಗ್ಯೂ ಜೀವಗೆ ಒಂದು ದಿವಸಕ್ಕೆ ಹತ್ತು ನೀಚಜನ್ಮ ಪ್ರಾಪ್ತಿಯಾಗಬಹುದು. ಇಂಥಾದ್ದನ್ನು ತಪ್ಪಿಸುವುದಕ್ಕೆ ಶ್ರೀಮನ್ಮಧ್ವಶಾಸ್ತ್ರ ಶ್ರವಣ ಮನನಾದಿ ಸಹಾಯದಿಂದ ಬಿಂಬಕ್ರಿಯಾಪೂರ್ವಕ ಕರ್ಮಮಾಡತಕ್ಕವರಿಗೇನೆ ಸದ್ಗತಿ ದೊರಕುವದೆಂದು ಸೂಚಿಸುವ ಉದ್ದಿಶ್ಯ ಈ ಸಂಧಿ ಉಪಕ್ರಮಿಸಿದ್ದಾರೆ.

॥ ಶ್ರೀಲಕ್ಷ್ಮೀವೆಂಕಟೇಶಾಯ ನಮಃ ॥

### ರಾಗ ಕಾನಡ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಮೂಲನಾರಾಯಣನು ಮಾಯಾ । ಲೋಲನಂತವತಾರನಾಮಕ । ವ್ಯಾಳರೂಪ ಜಯಾರಮಣನಾವೇಶನೆನಿಸುವನೂ ॥ ಲೀಲೆಗೈವಾನಂತ ಚೇತನ । ಜಾಲದೊಳು ಪ್ರದ್ಯುಮ್ನ ಬ್ರಹ್ಮಾಂ- । ಡಾಲಯದ ಒಳ ಹೊರಗೆ ನೆಲಸಿಹ ಶಾಂತಿಯನಿರುದ್ಧ ॥ ೧ ॥

ಐದುಕಾರಣ ರೂಪವಿಪ್ಪ- । ತ್ತೈದು ಕಾರ್ಯಗಳೆನಿಸುವವು ಆ- । ರೈದುರೂಪದಿ ರಮಿಸುತಿಪ್ಪನು ಈ ಚರಾಚರದಿ ॥ ಭೇದವರ್ಜಿತ ಮೂಜಗಜ್ಜ- । ನ್ಮಾದಿಕಾರಣ ಮುಕ್ತಿದಾಯಕ । ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞ ॥ ೨ ॥

ಕಾರ್ಯಕಾರಣ ಕರ್ತೃಗಳೊಳು ಸ್ವ- । ಭಾರ್ಯರಿಂದೊಡಗೂಡಿ ಕಪಿಲಾ- । ಚಾರ್ಯ ಕ್ರೀಡಿಸುತಿಪ್ಪ ತನ್ನೊಳು ತಾನು ಸ್ವೇಚ್ಛೆಯಲಿ ॥ ಪ್ರೇರ್ಯನಲ್ಲೆ ರಮಾಬ್ಜಭವಭವ- । ರಾರ್ಯ ರಕ್ಷಿಸಿ ಶಿಕ್ಷಿಸುವನು ಸ್ವ- । ವೀರ್ಯದಿಂದಲಿ ದಿವಿಜದಾನವತತಿಯನನುದಿನವಿ ॥ ೩ ॥

ಈ ಸಮಸ್ತ ಜಗತ್ತಿನೊಳಗಾ- । ಕಾಶದೊಳಗಿರುತಿಪ್ಪ ವ್ಯಾಪ್ತಾ- । ವೇಶನವತಾರಾಂತರಾತ್ಮಕನಾಗಿ ಪರಮಾತ್ಮ ॥ ನಾಶರಹಿತ ಜಗತ್ತಿನೊಳಗವ- । ಕಾಶದನು ತಾನಾಗಿ ಯೋಗಿ- । ಶಾಶಯಸ್ಥಿತ ತನ್ನೊಳೆಲ್ಲರ ನಿಟ್ಟು ಸಲಹುವನೂ ॥ ೪ ॥

ದಾರುಪಾಷಾಣಗತಪಾವಕ । ಬೇರೆಬೇರಿಪ್ಪಂತೆ ಕಾರಣ । ಕಾರ್ಯಗಳ ವೊಳಗಿದ್ದು ಕಾರಣ ಕಾರ್ಯನೆಂದೆನಿಸಿ । ತೋರಿಕೊಳ್ಳದೆ ಯೆಲ್ಲರೊಳು ವ್ಯಾ- । ಪಾರ ಮಾಡುವ ಯೋಗ್ಯತೆಗಳನು । ಸಾರ ಫಲಗಳ ನುಣಿಸಿ ಸಂತೈಸುವ ಕೃಪಾಸಾಂದ್ರ ॥ ೫ ॥

ಊರ್ಮಿಗಳ ವೋಲಿಪ್ಪ ಕರ್ಮವಿ- । ಕರ್ಮಜನ್ಯಫಲಾಫಲಂಗಳ । ನಿರ್ಮಲಾತ್ಮನು ಮಾಡಿ ಮಾಡಿಸಿ ವುಂಡುಣಿಸುತಿಪ್ಪ ॥ ನಿರ್ಮಮ ನಿರಾಮಯ ನಿರಾಶ್ರಯ । ಧರ್ಮವಿದ್ಧರ್ಮಾತ್ಮ ಧರ್ಮಗ । ದುರ್ಮತಿಯ ಜನರೊಲ್ಲನಪ್ರತಿಮಲ್ಲ ಶ್ರೀನಲ್ಲ ॥ ೬ ॥

ಜಲದ ವಡವಾನಲಗಳಂಬುಧಿ । ಜಲವನುಂಬುವವಬ್ದ ಮಳೆಗರೆ- । ದಿಳೆಗೆ ಶಾಂತಿಯನೀವುದನಳನು ತಾನೆ ಭುಂಜಿಪುದು ॥ ತಿಳಿವು ದೀಪರಿಯಲ್ಲಿ ಲಕ್ಷ್ಮೀ । ನಿಲಯ ಗುಣಕೃತಕರ್ಮಜಫಲಾ- । ಫಲಗಳುಂಡುಣಿಸುವನು ಸರ್ವಗ ಸರ್ವಜೀವರಿಗೆ ॥ ೭ ॥

ಪುಸ್ತಕಗಳವಲೋಕಿಸುತ ವಾಂ- । ತ್ರಸ್ತುತಿಗಳೆನಲೇನು ರವಿಯು ದ- । ಯಸ್ತಮಯಪರಿಯಂತ ಜಪಗಳ ಮಾಡಿ ಫಲವೇನು ॥ ಹೃತ್ಸ್ಥ ಪರಮಾತ್ಮನೆ ಸಮಸ್ತಾ- । ವಸ್ಥೆಗಳೊಳಿಪ್ಪೆಲ್ಲರೊಳಗೆ ನಿ- । ರಸ್ತಕಾಮನು ಮಾಡಿ ಮಾಡಿಪನೆಂದು ತಿಳಿಯದವ ॥ ೮ ॥

ಮದ್ಯಭಾಂಡವ ದೇವನದಿಯೊಳ- । ಗದ್ದಿ ತೊಳೆಯಲು ನಿತ್ಯದಲಿ ಪರಿ- । ಶುದ್ಧವಾಹುದೆ ಯೆಂದಿಗಾದರು ಹರಿಪದಾಬ್ಜಗಳ ॥ ಬುದ್ಧಿಪೂರ್ವಕ ಭಜಿಸದವಗೆ ವಿ- । ರುದ್ಧವೆನಿಸುವವೆಲ್ಲ ಕರ್ಮ ಸ- । ವೃದ್ಧಿಗಳ ದುಃಖವನೆ ಕೊಡುತಿಹವಧಮಜೀವರಿಗೆ ॥ ೯ ॥

ಭಕ್ತಿಪೂರ್ವಕವಾಗಿ ಮುಕ್ತಾ- । ಮುಕ್ತನಿಯಾಮಕನ ಸರ್ವೋ- । ದ್ರಿಕ್ತಮಹಿಮೆಗಳನವರತ ಕೊಂಡಾಡು ಮರೆಯದಲೆ । ಸಕ್ತನಾಗದೆ ಲೋಕವಾರ್ತೆ ಪ್ರ- । ಸಕ್ತಿಗಳ ನೀಡಾಡಿ ಪ್ರತಿಸ್ಮೃ- । ತ್ಯುಕ್ತಕರ್ಮವ ಮಾಡುತಿರು ಹರಿಯಾಜ್ಞೆಯೆಂದರಿದು ॥ ೧೦ ॥

ಲೋಪವಾದರು ಪರಿಯೆ ಕರ್ಮಜ । ಪಾಪಪುಣ್ಯಗಳೆರಡು ನಿನ್ನನು । ಲೇಪಿಸವು ನಿಷ್ಕಾಮಕನು ನೀನಾಗಿ ಮಾಡುತಿರೆ ॥ ಸೌಪರಣಿವರವಹನ ನಿನ್ನ ಮ- । ಹಾಪರಾಧಗಳೆಣಿಸದಲೆ ಸ್ವ- । ರ್ಗಾಪವರ್ಗದೊಳಿಟ್ಟು ಸಲಹುವ ಸತತ ಸುಖಸಾಂದ್ರ ॥ ೧೧ ॥

ಸ್ವರತಸುಖಮಯ ಸುಲಭ ವಿಶ್ವಂ- । ಭರ ವಿಶೋಕ ಸುರಾಸುರಾರ್ಚಿತ । ಚರಣಯುಗ ಚಾರ್ವಂಗ ಶಾರ್ಙ್ಗ ಶರಣ್ಯ ಜಿತಮನ್ಯು ॥ ಪರಮ ಸುಂದರತರ ಪರಾತ್ಪರ । ಶರಣಜನಸುರಧೇನು ಶಾಶ್ವತ । ಕರುಣಿ ಕಂಜದಳಾಕ್ಷ ಕಾಯೆನೆ ಕಂಗೊಳಿಪ ಸಿದ್ಧ ॥ ೧೨ ॥

ನಿರ್ಮಲನು ನೀನಾಗಿ ಕರ್ಮವಿ- । ಕರ್ಮಗಳನು ನಿರಂತರದಲಿ ಸು- । ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು ॥ ಭರ್ಮಗರ್ಭನ ಜನಕ ದಯದಲಿ । ದುರ್ಮತಿಗಳನು ಕೊಡದೆ ತನ್ನಯ । ಹರ್ಮ್ಯದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ ॥ ೧೩ ॥

ಕಲ್ಪಕಲ್ಪದಿ ಶರಣಜನವರ । ಕಲ್ಪವೃಕ್ಷನು ತನ್ನ ನಿಜಸಂ- । ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ ॥ ಅಲ್ಪಸುಖದಾಪೇಕ್ಷೆಯಿಂದಹಿ- । ತಲ್ಪನಾರಾಧಿಸದಿರೆಂದಿಗು । ಶಿಲ್ಪಿಕನ ಕೈಸಿಕ್ಕ ಶಿಲೆಯಂದದಲಿ ಸಂತೈಪಾ ॥ ೧೪ ॥

ದೇಶಭೇದಾಕಾಶದಂದದಿ । ವಾಸುದೇವನು ಸರ್ವಭೂತನಿ- । ವಾಸನೆನಿಸಿ ಚರಾಚರಾತ್ಮಕನೆಂದು ಕರೆಸುವನೂ ॥ ದ್ವೇಷಸ್ನೇಹೋದಾಸಿನಗಳ- । ಲ್ಲೀಶರೀರಗಳೊಳಗೆ ಅವರೋ- । ವಾಸನೆಗಳಂದದಲಿ ಫಲವೀವನು ಪರಬ್ರಹ್ಮಾ ॥ ೧೫ ॥

ಸಂಚಿತಾಗಾಮಿಗಳ ಕರ್ಮ ವಿ- । ರಿಂಚಿಜನಕನ ಬಿಡದೆ ಭಜಿಸಲು । ಮಿಂಚಿನಂದದಿ ಪೊಳೆವ ಪುರುಷೋತ್ತಮ ಹೃದಂಬರದಿ ॥ ವಂಚಿಸುವ ಜನರೊಲ್ಲ ಶ್ರೀವ- । ತ್ಸಾಂಚಿತ ಸುಸದ್ವಕ್ಷ ಕಾ ನಿ- । ಷ್ಕಿಂಚನ ಜನಪ್ರಿಯನು ಸುರಮುನಿಗೇಯ ಶುಭಕಾಯ ॥ ೧೬ ॥

ಕಾಲದ್ರವ್ಯಸುಕರ್ಮಶುದ್ಧಿಯ । ಪೇಳುವರು ಅಲ್ಪರಿಗೆ ಅವು ನಿ- । ರ್ಮೂಲಗೈಸುವವಲ್ಲ ಪಾಪಗಳೆಲ್ಲ ಕಾಲದಲಿ ॥ ತೈಲಧಾರೀಯಂತವನ ಪದ । ಪೋಲಯಿಸಿ ಸ್ತುತಿಸದಲೆ ನಿತ್ಯದಿ । ಬಾಲಿಶರು ಕರ್ಮಾದಿಗಳು ತಾರಕವೆನುತಲಿಹರು ॥ ೧೭ ॥

ಕಮಲಸಂಭವ ಶರ್ವ ಶಕ್ರಾ- । ದ್ಯಮರರೆಲ್ಲರು ಯಿವನ ದುರತಿ- । ಕ್ರಮಮಹಿಮೆಗಳ ಮನವಚನದಿಂ ಪ್ರಾಂತಗಾಣದಲೆ ॥ ಶ್ರಮಿತರಾಗಿ ಪದಾಬ್ಜ ಕಲ್ಪ- । ದ್ರುಮದ ನೆಳಲಾಶ್ರೈಸಿ ಲಕ್ಷ್ಮೀ । ರಮಣ ಸಂತೈಸೆಂದು ಪ್ರಾರ್ಥಿಪರತಿಭಕುತಿಯಿಂದ ॥ ೧೮ ॥

ವಾರಿಚರವೆನಿಸುವವು ದರ್ದುರ । ತಾರಕಗಳೆಂದರಿದು ಭೇಕವ- । ನೇರಿ ಜಲಧಿಯ ದಾಟುವೆನು ಯೆಂಬವನ ತೆರನಂತೆ ॥ ತಾರತಮ್ಯಜ್ಞಾನಶೂನ್ಯರು । ಸೂರಿಗಮ್ಯನ ತಿಳಿಯಲರಿಯದೆ । ಸೌರಶೈವಮತಾನುಗರನನುಸರಿಸಿ ಕೆಡುತಿಹರು ॥ ೧೯ ॥

ಕ್ಷುಧೆಯುಗೋಸುಗ ಪೋಗಿ ಕಾನನ । ಬದರಿಫಲಗಳಪೇಕ್ಷೆಯಿಂದಲಿ । ಪೊದೆಯೊಳಗೆ ಶಿಗಬಿದ್ದು ಬಾಯ್ದೆರೆವವನ ತೆರದಂತೆ ॥ ವಿಧಿಪಿತನ ಪೂಜಿಸದೆ ನಿನ್ನಯ । ವುದರಗೋಸುಗ ಸಾಧುಲಿಂಗ । ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ ॥ ೨೦ ॥

ಕ್ಷೋಣಿಪತಿಸುತನೆನಿಸಿ ಕೈ ದು- । ಗ್ಗಾಣಿಗೊಡ್ಡುವ ತೆರದಿ ಸುಮನಸ । ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ ॥ ವೇಣುಗಾನಪ್ರಿಯನ ಐಹಿಕ ಸು- । ಖಾನುಭವ ಬೇಡದಲೆ ಲಕ್ಷ್ಮೀ । ಪ್ರಾಣನಾಥನ ಪಾದಭಕ್ತಿಯ ಬೇಡು ಕೊಂಡಾಡು ॥ ೨೧ ॥

ಜ್ಞಾನಜ್ಞೇಯಜ್ಞಾತೃವೆಂಬಭಿ- । ಧಾನದಿಂ ಬುಧ್ಯಾದಿಗಳ ಅಧಿ- । ಷ್ಠಾನದಲಿ ನೆಲಸಿದ್ದು ಕರೆಸುತ ತತ್ತದಾಹ್ವಯದೀ ॥ ಭಾನುಮಂಡಲಗ ಪ್ರದರ್ಶಕ । ತಾನೆನಿಸಿ ವಶವಾಗುವನು ಶುಕ- । ಶೌನಕಾದಿ ಮುನೀಂದ್ರ ಹೃದಯಾಕಾಶಗತಚಂದ್ರ ॥ ೨೨ ॥

ಉದಯವ್ಯಾಪಿನಿ ದರ್ಶಪೌರ್ಣಿಮ- । ದಧಿಕಯಾಮವು ಶ್ರವಣವಭಿಜಿತು । ಸದನವ್ಯೈದಿರೆ ಮಾಳ್ಪತೆರದಂದದಲಿ ಹರಿಸೇವೆ ॥ ವಿಧಿನಿಷೇಧಗಳೇನು ನೋಡದೆ । ವಿಧಿಸುತಿರು ನಿತ್ಯದಲಿ ತನ್ನಯ । ಸದನದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನೂ ॥ ೨೩ ॥

ನಂದಿವಾಹನರಾತ್ರಿಸಾಧನೆ । ಬಂದದ್ವಾದಶಿ ದಶಮಿಪೈತೃಕ । ಸಂಧಿಸಿಹ ಸಮಯದಲಿ ಶ್ರವಣವ ತ್ಯಜಿಸುವಂತೆ ಸದಾ ॥ ನಿಂದೆಯಿಂದಲಿ ಬಂದ ದ್ರವ್ಯವ । ಕಣ್ದೆರೆದು ನೋಡದಲೆ ಶ್ರೀಮದ- । ನಂದತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ॥ ೨೪ ॥

ಶ್ರೀಮನೋರಮ ಮೇರುತ್ರಿಕಕು- । ಬ್ಧಾಮ ಸತ್ಕಲ್ಯಾಣಗುಣನಿ- । ಸ್ಸೀಮ ಪಾವನನಾಮ ದಿವಿಜೋದ್ದಾಮ ರಘುರಾಮಾ ॥ ಪ್ರೇಮಪೂರ್ವಕ ನಿತ್ಯ ತನ್ನ ಮ- । ಹಾಮಹಿಮೆಗಳ ತುತಿಸುವರಿಗೆ ಸು- । ದಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ ॥ ೨೫ ॥

ತಂದೆತಾಯ್ಗಳ ಕುರುಹನರಿಯದ । ಕಂದ ದೇಶಾಂತರದೊಳಗೆ ತ- । ನ್ನಂದದಲಿಯಿಪ್ಪವರ ಜನನೀಜನಕರನು ಕಂಡು ॥ ಹಿಂದೆ ಯೆನ್ನನು ಪಡೆದವರು ಯಿವ- । ರಂದದಲಿ ಯಿಪ್ಪರೆಲೊ ನಾನವ- । ರೆಂದು ಕಾಣು ಪೆನೆನುತ ಹುಡುಕುವ ತೆರದಿ ಕೋವಿದರು ॥ ೨೬ ॥

ಶ್ರುತಿಪುರಾಣಸಮೂಹದೊಳು ಭಾ- । ರತ ಪ್ರತಿಪ್ರತಿಪದಗಳೊಳು ನಿ- । ರ್ಜಿತನ ಗುಣರೂಪಗಳ ಹುಡುಕುತ ಪರಮ ಹರುಷದಲಿ ॥ ಮತಿ ಮತರು ಪ್ರತಿದಿವಸ ಸಾರ- । ಸ್ವತಸಮುದ್ರದಿ ಶಫರಿಯಂದದಿ । ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದಾ ॥ ೨೭ ॥

ಮತ್ಸ್ಯಕೇತನಜನಕ ಹರಿ ಶ್ರೀ- । ವತ್ಸಲಾಂಛನ ನಿಜಶರಣ ಜನ । ವತ್ಸಲ ವರಾರೋಹ ವೈಕುಂಠಾಲಯನಿವಾಸಿ ॥ ಚಿತ್ಸುಖಪ್ರದ ಸಲಹೆ ನಲು ಗೋ । ವತ್ಸಧ್ವನಿಗೊದಗುವತೆರದಿ ಪರ- । ಮೋತ್ಸಹದಿ ಬಂದೊ ದಗುವನು ನಿರ್ಮತ್ಸರರ ಬಳಿಗೆ ॥ ೨೮ ॥

ಸೂರಿಗಳಿಗೆ ಸಮಿಾಪಗ ದುರಾ- । ಚಾರಿಗಳಿಗೆಂದೆಂದು ದೂರಾ- । ದ್ದೂರತರ ದುರ್ಲಭನೆನಿಸುವನು ದೈತ್ಯಸಂತತಿಗೆ ॥ ಸಾರಿಸಾರಿಗೆ ನೆನೆವ ವರ ಸಂ- । ಸಾರವೆಂಬ ಮಹೋರಗಕೆ ಸ- । ರ್ಪಾರಿಯೆನಿಸಿ ಸದಾ ಸುಸೌಖ್ಯವನೀವ ಸುಜನರಿಗೆ ॥ ೨೯ ॥

ಚಕ್ರಶಂಖಗದಾಬ್ಜಧರ ದುರ- । ತಿಕ್ರಮ ದುರಾವಾಸ ವಿಧಿಶಿವ । ಶಕ್ರಸೂರ್ಯಾದ್ಯಮರಪೂಜ್ಯಪದಾಬ್ಜ ನಿರ್ಲಜ್ಜಾ ॥ ಶುಕ್ರಶಿಷ್ಯನ ಅಶ್ವ ಮೇಧಾ । ಪ್ರಕ್ರಿಯವ ಕೆಡಿಸಬ್ಜಜಾಂಡವ- । ತಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು ॥ ೩೦ ॥

ಶಕ್ತರೆನಿಸುವರಿಲ್ಲ ಹರಿವ್ಯತಿ- । ರಿಕ್ತಸುರಗಣದೊಳಗೆ ಸರ್ವೋ- । ದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ ॥ ಭಕ್ತಿಪೂರ್ವಕವಾಗಿ ಅನ್ಯಪ್ರ- । ಸಕ್ತಿಗಳ ನೀಡಾಡಿ ಪರಮಾ- । ಸಕ್ತನಾಗಿರು ಹರಿಕಥಾಮೃತಪಾನವಿಷಯದಲೀ ॥ ೩೧ ॥

ಪ್ರಣತಕಾಮದ ಭಕ್ತಚಿಂತಾ- । ಮಣಿ ಮಣಿಮಯಾಭರಣಭೂ ಷಿತ । ಫಣಿ ಗುಣತ್ರಯದೂರವರ್ಜಿತ ಗಹನ ಸನ್ಮಹಿಮಾ ॥ ಎಣಿಸ ಭಕ್ತರ ದೋಷಗಳ ಕುಂ- । ಭಿಣಿಜೆಯಾಣ್ಮ ಶರಣ್ಯ ರಾಮಾ- । ರ್ಪಣ ವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮಾ ॥ ೩೨ ॥

ಬಲ್ಲೆನೆಂಬುವರಿಲ್ಲವೀತನ । ವಲ್ಲೆನೆಂಬುವರಿಲ್ಲ ಲೋಕದೊ- । ಳಿಲ್ಲ ದಿಹ ಸ್ಥಳವಿಲ್ಲವಲ್ಲೈಜ್ಞಾತಜನರಿಲ್ಲಾ ॥ ಬೆಲ್ಲದಚ್ಚಿನ ಬೊಂಬೆಯಂದದಿ । ಯೆಲ್ಲರೊಳಗಿರುತಿಪ್ಪ ಶ್ರೀಭೂ- । ನಲ್ಲ ಯಿವಗೆಣೆಯಿಲ್ಲವಪ್ರತಿಮಲ್ಲ ಜಗಕೆಲ್ಲ ॥ ೩೩ ॥

ಶಬ್ದಗೋಚರ ಶಾರ್ವರೀಕರ- । ನಬ್ದವಾಹನನನುಜ ಯದುವಂ-। ಶಾಬ್ಧಿಚಂದ್ರಮ ನಿರುಪಮನು ನಿಸ್ಸೀಮ ಸಮಿತಸಮ ॥ ಲಬ್ಧನಾಗುವ ತನ್ನವಗೆ ಪ್ರಾ- । ರಬ್ಧಕರ್ಮಗಳುಣಿಸಿ ತೀವ್ರದಿ । ಕ್ಷುಬ್ಧಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ॥ ೩೪ ॥

ಶ್ರೀವಿರಿಂಚಾದ್ಯಮರವಂದಿತ । ಯಿಾವಸುಂಧರೆಯೊಳಗೆ ದೇವಕಿ । ದೇವಿಜಠರದೊಳಗವತರಿಸಿದನಜನು ಜನದಂತೆ ॥ ರೇವತೀರಮಣಾ ನುಜನು ಸ್ವಪ- । ದಾವಲಂಬಿಗಳನು ಸಲಹಿ ದೈ- । ತ್ಯಾವಳಿಯ ಸಂಹ ರಿಸಿದ ಜಗನ್ನಾಥವಿಟ್ಠಲನೂ ॥ ೩೫ ॥

ಅಂತು ಸಂಧಿ ೧೯ಕ್ಕೆ ಪದ ೫೯೯ಕ್ಕೆ ಕರ್ಮವಿಮೋಚನಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೨೦. ಗುಣತಾರತಮ್ಯಸಂಧಿ.

ಮನುಷ್ಯಾದಿ ಸರ್ವೋತ್ತಮನಾದ ಮುಕುಂದನ ವರೆಗೂ ಗುಣತಾರತಮ್ಯ ಜ್ಞಾನವಾಗದೆ ಇದ್ದಪಕ್ಷದಲ್ಲಿ ಅನುಷ್ಠಾನವಾದ ತಮಸ್ಸು ಆಗುತ್ತದೆಂದೂ, ಮೋಕ್ಷವಾಗದೆಂದೂ ಶ್ರೀಸರ್ವಜ್ಞಾಚಾರ್ಯರು ಮ. ಭಾ. ತಾ. ನಿರ್ಣಯದಲ್ಲಿ ಅಪ್ಪಣೆಕೊಡಿಸಿರುವದರಿಂದ ಪರಮಾತ್ಮನನ್ನು ಆರಂಭಿಸಿ ಮನುಷ್ಯೋತ್ತಮರ ಪರ್ಯಂತ ಗುಣತಾರತಮ್ಯವನ್ನು ಈ ಸಂಧಿಯಲ್ಲಿ ಹೇಳುತ್ತಾರೆ.

---

॥ ಶ್ರೀಲಕ್ಷ್ಮೀಪತಯೇ ನಮಃ ॥

ರಾಗ ಅಠಾಣ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀಧರಾದುರ್ಗಾಮನೋರಮ । ವೇಧಮುಖಸುಮನಸಗಣ ಸಮಾ-। ರಾಧಿತಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ ॥ ಗೋಧರ ಫಣಿವರಾತಪತ್ರ ನಿ- । ಷೇಧದೋಷ ವಿಚಿತ್ರಕರ್ಮ ಸು- । ಬೋಧಸುಖಮಯ ಗಾತ್ರ ಪರಮ ಪವಿತ್ರ ಸುಚರಿತ್ರಾ ॥ ೧ ॥

ನಿತ್ಯನಿರ್ಮಲ ನಿಗಮವೇದ್ಯೋ-। ತ್ಪತ್ತಿಸ್ಥಿತಿಲಯದೂರವರ್ಜಿತ। ಪ್ರತ್ಯಗಾತ್ಮ ಪ್ರಸಿದ್ಧ ಮುಕ್ತಾಮುಕ್ತಗಣಸೇವ್ಯಾ ॥ ಸತ್ಯಕಾಮ ಶರಣ್ಯ ಶಾಶ್ವತ । ಭೃತ್ಯವತ್ಸಲ ಭಯನಿವಾರಣ-। ನತ್ಯಧಿಕಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥ ೨ ॥

ಪರಮಪುರುಷನ ರೂಪಗುಣವನು- । ಸರಿಸಿ ಕಾಂಬಳು ಪ್ರವಹದಂದದಿ । ನಿರುಪಮಳು ನಿರ್ದುಃಖಸುಖಸಂಪೂರ್ಣಳೆನಿಸುವಳೂ ॥ ಹರಿಗೆ ಧಾಮತ್ರಯವೆನಿಸಿಯಾ- । ಭರಣ ವಸನಾಯುಧಗಳಾಗಿ- । ದ್ದರಿಗಳನೆ ಸಂಹರಿಸುವಳು ಅಕ್ಷರಳೆನಿಸಿಕೊಂಡು ॥ ೩ ॥

ಈತಗಿಂತಾನಂತಗುಣದಲಿ। ಶ್ರೀತರುಣಿ ತಾ ಕಡಿಮೆಯೆನಿಪಳು। ನಿತ್ಯಮುಕ್ತಳು ನಿರ್ವಿಕಾರಳು ತ್ರಿಗುಣವರ್ಜಿತಳೂ ॥ ಧೌತಪಾಪ ವಿರಿಂಚಿಪವನರ। ಮಾತೆಯೆನಿಪ ಮಹಾಲಕುಮಿ ವಿ-। ಖ್ಯಾತಳಾಗಿಹಳೆಲ್ಲ ಕಾಲದಿ ಶ್ರುತಿಪುರಾಣದೊಳು ॥ ೪ ॥

ಕಮಲಸಂಭವ ಪವನರೀರ್ವರು । ಸಮರು ಸಮವರ್ತಿಗಳು ರುದ್ರಾ-। ದ್ಯಮರಗಣಸಂಸೇವಿತ ಪರಬಹ್ಮನಾಮಕರು ॥ ಯಮಳರಿಗೆ ಮಹಲಕ್ಷ್ಮಿ ತಾನು-। ತ್ತಮಳು ಕೋಟಿಸಜಾತಿಗುಣದಿಂ-। ದಮಿತ ಸುವಿಜಾತ್ಯಧಮರೆನಿಪರು ಬ್ರಹ್ಮನಾಯುಗಳು ॥ ೫ ॥

ಪತಿಗಳಿಂದ ಸರಸ್ವತೀಭಾ-। ರತಿಗಳಧಮರು ನೂರುಗುಣಪರಿ-। ಮಿತವಿಜಾತ್ಯವರರು ಬಲಜ್ಞಾನಾದಿಗುಣದಿಂದಾ॥ ಅತಿಶಯಳು ವಾಗ್ದೇವಿ ಶ್ರೀಭಾ-। ರತಿಗೆ ಪದದಪ್ರಯುಕ್ತ ವಿಧಿಮಾ-। ರುತರ ಪೋಲ್ಕಿಂತಿಪುದು ಸದ್ಭಕ್ತಿಯಲಿ ಕೋವಿದರೂ ॥ ೬ ॥

ಖಗಪ ಫಣಿಪತಿ ಮೃಡರು ಸಮ ವಾ-। ಣಿಗೆ ಶತಗುಣಾಧಮರು ಮೂವರು। ಮಿಗಿಲೆನಿಸುವನು ಶೇಷ ಪದದಿಂದಲಿ ತ್ರಿಯಂಬಕಗೆ॥ ನಗಧರನ ಷಣ್ಮಹಿಷಿಯರು ಪ-। ನ್ನಗವಿಭೂಷಣಗೈದು ಮೇನಕೆ। ಮಗಳು ವಾರುಣಿಸೌಪರಣಿಗಳಿಗಧಿಕವೆರಡುಗುಣಾ ॥ ೭ ॥

ಗರುಡಶೇಷಮಹೇಶರಿಗೆ ಸೌ-। ಪರಣಿವಾರುಣಿ ಪಾರ್ವತಿಯು ಮೂ-। ವರು ದಶಾಧಮ ವಾರುಣಿಗೆ ಕಡಿಮೆನಿಸುವಳು ಗೌರಿ ॥ ಹರನಮಡದಿಗೆ ಹತ್ತುಗುಣದಲಿ। ಸುರಪಕಾಮರು ಕಡಿಮೆ ಇಂದ್ರಗೆ। ಕೊರತೆಯೆನಿಸುವ ಮನ್ಮಥನು ಪದದಿಂದಲಾವಾಗಾ ॥ ೮ ॥

ಈರಯಿದುಗುಣಕಡಿಮೆಯಾಹಂ-। ಕಾರಿಕಪ್ರಾಣನು ಮನೋಜನ-। ಗಾರಿಗಳಿಗನಿರುದ್ಧರತಿಮನುದಕ್ಷಗುರುಶಚಿಯು ॥ ಆರು ಜನ ಸಮ ಪ್ರಾಣನಿಂದಲಿ। ಹೊರಗೆ ಯೆನಿಪರು ಹತ್ತುಗುಣದಲಿ। ಮಾರಜಾದ್ಯರಿಗೈದುಗುಣದಿಂದಧಮ ಪ್ರವಹಾಖ್ಯಾ ॥ ೯ ॥

ಗುಣದ್ವಯುಗಳಿಂ ಕಡಿಮೆ ಪ್ರವಹಗೆ । ಇನಶಶಾಂಕ ಯಮಸ್ವ ಯಂಭುವ । ಮನುಮಡದಿ ಶತರೂಪ ನಾಲ್ವರು ಪಾದಪಾದಾರ್ಧ ॥ ವನಧಿನೀಚಪದಾರ್ಧ ನಾರದ- । ಮುನಿಗೆ ಭೃಗ್ವಗ್ನಿಪ್ರಸೂತಿಗ- । ಳೆನಿಸುವರು ಪಾದಾರ್ಧಗುಣದಿಂದಧಮರಹುದೆಂದೂ ॥ ೧೦ ॥

ಹುತವಹಗೆ ದ್ವಿಗುಣಾಧಮರು ವಿಧಿ । ಸುತಮರೀಚ್ಯಾದಿಗಳು ವೈವ- । ಸ್ವತನು ವಿಶ್ವಾಮಿತ್ರರಿಂಗೆ ಕಿಂಚಿದ್ಗುಣಾಧಮರು ॥ ಪ್ರತಿವರಜಗನ್ಮಿತ್ರ ವರ ನಿಋ- । ಋತಿ ಪ್ರಾವಹಿ ತಾರರಿಗೆ ಕಿಂ- । ಚಿತಗುಣಾಧಮ ಧನಪ ವಿಷ್ವಕ್ಸೇನರೆನಿಸುವರೂ ॥ ೧೧ ॥

ಧನಪವಿಷ್ವಕ್ಸೇನಗೌರೀ । ತನಯರಿಗೆ ಪುಕ್ತೇತರರು ಸಮ- । ರೆನಿಸುವರು ಯೆಂಭತ್ತಯಿದುಜನ ಶೇಷಶತರೆಂದೂ ॥ ದಿನಪರಾರೇಳಧಿಕ ನಾಲ್ವ- । ತ್ತನಿಲರೇಳ್ವಸು ರುದ್ರರೀರೈ- । ದನಿತು ವಿಶ್ವೇದೇವಋಭುವಶ್ವಿನಿದ್ಯಾವಾಪೃಥಿವೀ ॥ ೧೨ ॥

ಇವರಿಗಿಂತಲಿ ಕೊರತೆಯೆನಿಪರು । ಚ್ಯವನ ಸನಕಾದಿಗಳು ಪಾವಕ । ಕವಿಯುಚಥ್ಯ ಜಯಂತ ಕಶ್ಯಪ ಮನುಗಳೇಕದಶ ॥ ಧ್ರುವ ನಹುಷ ಶಶಿಬಿಂದು ಹೈಹಯ । ದವುಷಿಯಂತಿ ವಿರೋಚನನ ನಿಜ । ಕುವರ ಬಲಿಮೊದಲಾದ ಸಪ್ತೇಂದ್ರರು ಕಕುಸ್ಥ ಗಯ ॥ ೧೩ ॥

ಪೃಥುಭರತಮಾಂಧಾತಪ್ರಿಯ- । ವ್ರತಮರುತಪ್ರಹ್ಲಾದಸುಪರೀ- । ಕ್ಷಿತಹರಿಶ್ಚಂದ್ರಾಂಬರೀಷೋತ್ತಾನಪಾದಮುಖ ॥ ಶತಸುಪುಣ್ಯಶ್ಲೋಕರು ಗದಾ- । ಭೃತಗಧಿಷ್ಠಾನರು ಸುಪ್ರಿಯ । ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ॥ ೧೪ ॥

ನಳಿನಿಸಂಜ್ಞಾರೋಹಿಣೀ ಶಾ- । ಮಲ ವಿರಾಟ್ ಪರ್ಜನ್ಯರಧಮರು । ಯಲರುಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳೆಗೆ ॥ ಜಲಮಯ ಬುಧನಧಮನು ದ್ವಿಗ್ಗುಣದಿ । ಕೆಳಗೆನಿಸುವರುಷಾ ಶನೈಶ್ಚರ- । ರಿಳೆಗೆ ಈರುಗುಣಾಧಮರುಷಾದೇವಿದೆಸೆಯಿಂದ ॥ ೧೫ ॥

ಎರಡುಗುಣ ಕವರ್ಗಾಧಿಪತಿ ಪು- । ಷ್ಕರ ಕಡಿಮೆಯಾಜಾನ ದಿವಿಜರು । ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ ॥ ಸುರಪ ನಾಲಯುಗಾಯುಕೋತ್ತಮ- । ರೆರಡಯಿದುಗುಣದಿಂದಧಮ ತುಂ- । ಬುರಗೆ ಸಮ ನವಕೋಟಿ ಋಷಿಗಳು ನೂರುಜನರುಳಿದು ॥ ೧೬ ॥

ಅವರವರ ಪತ್ನಿಯರು ಅಪ್ಸರ । ಯುವತಿಯರು ಸಮ ಉತ್ತಮರನುಳಿ- । ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ ॥ ಕುವಲಯಾಧಿಪರೀರಯಿದುಗುಣ- । ವವನಿಪಸ್ತ್ರೀಯರು ದಶೋತ್ತರ । ನವತಿಗುಣದಿಂದಧಮರೆನಿಪರು ಮಾನುಷೋತ್ತಮರು ॥ ೧೭ ॥

ಸತ್ವಸತ್ವರು ಸತ್ವರಾಜಸ । ಸತ್ವತಾಮಸ ಮೂವರು ರಜ- । ಸ್ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರೂ ॥ ನಿತ್ಯಬದ್ಧರು ರಜೋರಜರು- । ತ್ಪತ್ತಿ ಭೂಸ್ವರ್ಗದೊಳು ನರಕದಿ । ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರೂ ॥ ೧೮ ॥

ತಮಸ್ಸಾತ್ವಿಕರೆನಿಸಿಕೊಂಬರು । ಅಮಿತನಾಖ್ಯಾತ್ಯಸುರಗಣವಿದೆ । ತಮೋರಾಜಸರೆನಿಸಿಕೊಂಬರು ದೈತ್ಯಸಮುದಾಯಾ ॥ ತಮಸ್ತಾಮಸ ಕಲಿ ಪುರಂಧ್ರಿಯು । ಅಮಿತದುರ್ಗುಣಪೂರ್ಣ ಸರ್ವಾ- । ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ॥ ೧೯ ॥

ಇವನ ಪೋಲುವ ಪಾಪಿಜೀವರು । ಭುವನಮೂರರೊಳಿಲ್ಲ ನೋಡಲು । ನವವಿಧದ್ವೇಷಗಳಿಗಾಕರನೆನಿಸಿಕೊಳುತಿಪ್ಪಾ ॥ ಬವರದೊಳು ಭಂಗಾರದೊಳು ನಟ । ಯುವತಿದ್ಯೂತಾಪೇಯಮ್ಯಪದೊಳು । ಕವಿಸಿ ಮೋಹದಿ ಕೆಡಿಸುವನು ಯೆಂದರಿದು ತ್ಯಜಿಸುವದೂ ॥ ೨೦ ॥

ತ್ರಿವಿಧಜೀವಪ್ರತತಿಗಳ ಸ- । ಗ್ಗವ್ರೊಳೆಯಾಣ್ಮಾಲಯನು ನಿರ್ಮಿಸಿ । ಯುವತಿಯರ ಪೊಡಗೂಡಿ ಕ್ರೀಡಿಸುವನು ಕೃಪಾಸಾಂದ್ರ ॥ ದಿವಿಜದಾನವ ತಾರತಮ್ಯದ । ವಿವರ ತಿಳಿವ ಮಹಾತ್ಮರಿಗೆ ಬಾ- । ನ್ನವಿರಸಖ ತಾನೊಲಿದು ವುದ್ಧರಿಸುವನು ಭವದಿಂದ ॥ ೨೧ ॥

ದೇವದೈತ್ಯರ ತಾರತಮ್ಯವು । ಪಾವಮಾನಿಮತಾನುಗರಿಗಿದು । ಕೇವಲಾವಶ್ಯಕವು ತಿಳಿವದು ಸರ್ವಕಾಲದಲಿ ॥ ದಾವಶಿಖಿ ಪಾಪಾಟವಿಗೆ ನವ । ನಾವೆಯೆನಿಪದು ಭವಸಮುದ್ರಕೆ । ಪಾವಟಿಗೆ ವೈಕುಂಠಲೋಕಕಿದೆಂದು ಕರೆಸುವದು ॥ ೨೨ ॥

ತಾರತಮ್ಯಜ್ಞಾನ ಮುಕ್ತಿ । ದ್ವಾರವೆನಿಪುದು ಭಕ್ತಜನರಿಗೆ । ತೋರಿ ಕೇಳಿ ಸುಖಾಬ್ಧಿಯೊಳು ಲೋಲಾಡುವದು ಬುಧರು ॥ ಕ್ರೂರಮಾನವರಿಗಿದು ಕರ್ಣಕ- । ಠೋರವೆನಿಪುದು ನಿತ್ಯದಲಿ ಅಧಿ- । ಕಾರಿಗಳಿಗಿದನರುಪುವದು ದುಸ್ತರ್ಕಿಗಳ ಬಿಟ್ಟು ॥ ೨೩ ॥

ಹರಿಸಿರಿವಿರಿಂಚೀರಭಾರತಿ। ಗರುಡಫಣಿಪತಿಷಣ್ಮಹಿಷಿಯರು । ಗಿರಿಜನಾಕೇಶಸ್ಮರಪ್ರಾಣಾನಿರುದ್ಧಶಚೀ ॥ ಗುರುರತೀಮನುದಕ್ಷಪ್ರವಹಾ । ಮರುತಮಾನವಿಯಮಶಶಿದಿವಾ- । ಕರವರುಣನಾರದಸುರಾಸ್ಯಪ್ರಸೂತಿ ಭೃಗುಮುನಿಪಾ ॥ ೨೪ ॥

ವ್ರತತಿಜಾಸನಪುತ್ರರೆನಿಸುವ । ವ್ರತಿವರಮರೀಚ್ಯತ್ರಿವೈವ- । ಸ್ವತನು ತಾರಾಮಿತ್ರನಿಋುಋತಿಪ್ರವಹಮಾರುತನ ॥ ಸತಿಧನೇಶಾಶ್ವಿನಿಗಳಿಗಣ । ಪತಿಯು ವಿಷ್ವಕ್ಸೇನಶೇಷಸು- । ಶತರುಮನುಗಳುಚಥ್ಯಚಾವನಮುನಿಗಳಿಗೆ ನಮಿಪೆ ॥ ೨೫ ॥

ಶತಸುಪುಣ್ಯಶ್ಲೋಕರೆನಿಸುವ । ಕ್ಷಿತಿಪರಿಗೆ ನಮಿಸುವೆನು ಭಾಗೀ-। ರಥಿವಿರಾಟ್ಪರ್ಜನ್ಯರೋಹಿಣಿಶಾಮಲಾಸಂಜ್ಞಾ ॥ ಹುತವಹನ ಮಹಿಳಾ ಬುಧೋಷಾ । ಕ್ಷಿತಿಶನೈಶ್ಚರಪುಷ್ಕರರಿಗಾ- । ನುತಿಸಿ ಬಿನ್ನೈಸುವೆನು ಭಕ್ತಿಜ್ಞಾನಕೊಡಲೆಂದು ॥ ೨೬ ॥

ನೂರಧಿಕವಾಗಿಪ್ಪಮತ್ಸ್ಯದಿ- । ನಾರುಸಾವಿರ ನಂದಗೋಪ ಕು- । ಮಾರನರ್ಧಾಂಗಿಯರಗಸ್ತ್ಯಾದಿಕ ಮುನೀಶ್ವರರು । ಊರ್ವಶಿಯು ಮೊದಲಾದ ಅಪ್ಸರ । ನಾರಿಯರು ಶತತುಂಬುರರು ಕಂ- । ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಯೆನ್ನಿಂದ ॥ ೨೭ ॥

ಪಾವನರು ಶುಚಿಶುದ್ಧನಾಮಕ । ದೇವತೆಗಳಾಜಾನಜರಪಿತೃ । ದೇವನರಗಂಧರ್ವರವನಿಪಮಾನುಷೋತ್ತಮರು ॥ ಈ ವಸುಮತಿಯೊಳುಳ್ಳ ವೈಷ್ಣವ- । ರಾವಳಿಯೊಳಿಹರೆಂದು ನಿತ್ಯದಿ । ಸೇವಿಪುದು ಸಂತೋಷದಿಂ ಸರ್ವಪ್ರಕಾರದಲೀ ॥ ೨೮ ॥

ಮಾನುಷೋತ್ತಮರನು ಪಿಡಿದು ಚತು- । ರಾನನಾಂತ ಶತೋತ್ತಮತ್ವ ಕ್ರ- । ಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥ ॥ ಶ್ರೀನಿಧಿ ಜಗನ್ನಾಥವಿಟ್ಠಲ । ತಾನೆ ವಲಿದೀವನು ನಿರಂತರ । ಸಾನುರಾಗದಿ ಪಠಿಸುವದು ಪ್ರಾಜ್ಞರಿದ ಮರೆಯದಲೇ ॥ ೨೯ ॥

ಅಂಶಃ ಸಂಧಿ ೨೦ಕ್ಕೆ ಪದ ೬೨೮ಕ್ಕೆ ಗುಣತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

---

## ೨೧. ಬೃಹತ್ತಾರತಮ್ಯಸಂಧಿ.

### (ಆವೇಶಾವತಾರಸಂಧಿ.)

ದೇವರ ಮತ್ತು ದೇವತೆಗಳ ಅವತಾರಗಳನ್ನೂ ಅಂಶಾವೇಶಾವತರಣ ಯುಕ್ತ ತಾರತಮ್ಯವನ್ನೂ ಹೇಳುತ್ತಾರೆ.

---

॥ ಶ್ರೀರಮಾವಲ್ಲಭಾಯ ನಮಃ ॥

ರಾಗ ಸಾವೇರಿ, ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ । ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:—** ಹರಿಸಿರಿವಿರಿಂಚೀರಮುಖ ನಿ- । ರ್ಜರರ ಆವೇಶಾವತರಗಳ । ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿಪೂರ್ವಕದಿ ॥

ಮೀನ ಕೂರ್ಮ ಕ್ರೋಡ ನರಹರಿ । ಮಾಣವಕ ಭೃಗುರಾಮ ದಶ ರಥ । ಸೂನು ಯಾದವ ಬುದ್ಧ ಕಲ್ಕೀ ಕಪಿಲ ವೈಕುಂಠಾ ॥ ಶ್ರೀನಿವಾಸ ವ್ಯಾಸ ಋಷಭ ಹ- । ಯಾನನಾ ನಾರಾಯಣೀ ಹಂ- । ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷೀಕೇಶಾ ॥ ೧ ॥

ಹರಿಯು ನಾರಾಯಣನು ಕೃಷ್ಣಾ- । ಸುರಕುಲಾಂತಕ ಸೂರ್ಯ ಸಮಪ್ರಭ । ಕರೆಸುವನು ನಿರ್ದುಷ್ಟ ಸುಖಪರಿಪೂರ್ಣ ತಾನೆಂದು ॥ ಸರುವ ದೇವೋತ್ತಮನು ಸರ್ವಗ । ಪರಮ ಪುರುಷ ಪುರಾತನ ಜರಾ- । ಮರಣವರ್ಜಿತ ವಾಸುದೇವಾದ್ಯಮಿತರೂಪಾತ್ಮಾ ॥ ೨ ॥

ಈ ನಳಿನಭವಜನನಿ ಲಕ್ಷ್ಮೀ । ಜ್ಞಾನಬಲಭಕ್ತ್ಯಾದಿಗುಣಸಂ- । ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ॥ ಹೀನಳೆನಿಪಳನಂತ ಗುಣದಿ ಪು- । ರಾಣಪುರುಷಗೆ ಪ್ರಕೃತಿಗಿನ್ನು ಸ- । ಮಾನರೆನಿಸುವರಿಲ್ಲ ಮುಕ್ತಾಮುಕ್ತಸುರರೊಳಗೆ ॥ ೩ ॥

ಗುಣಗಳ ತ್ರಯ ಮಾನಿ ಶ್ರೀಕುಂ- । ಭಿನಿ ಮಹಾದುರ್ಗಾಂಭೃಣೀ ರು- । ಕ್ಮಿಣಿಯು ಸತ್ಯಾ ಶಾಂತಿ ಕೃತಿ ಜಯೆ ಮಾಯೆ ಮಹಲಕುಮಿ ॥ ಜನಕಜಾ ಕಮಲಾಲಯಾ ದ- । ಕ್ಷಿಣೆಯು ಪದ್ಮಾ ತ್ರಿಲೋಕೇಶ್ವರಿ- । ಯಣುಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳೂ ॥ ೪ ॥

ಘೋಟಕಾಸ್ಯನ ಮಡದಿಗಿಂದಲಿ । ಹಾಟಕೋದರ ಪವನರೀ ರ್ವರು । ಕೋಟಿಗುಣದಿಂದಧಮರೆನಿಪರು ಯಾವಕಾಲದಲಿ ॥ ಖೇಟ ಪತಿ ಶೇಷಾಮರೇಂದ್ರರ । ಸಾಟಿಮಾಡದೆ ಶ್ರೀಶನ ಕೃಪಾ । ನೋಟದಿಂ ದಲಿ ಸರ್ವರೊಳು ವ್ಯಾಪಾರ ಮಾಡುವರೂ ॥ ೫ ॥

ಪುರುಷಬ್ರಹ್ಮ ವಿರಿಂಚಿಯು ಮಹಾ- । ನ್ಮರುತ ಮುಖ್ಯಪ್ರಾಣ ಧೃತಿಸ್ಮೃತಿ । ಗುರುವರ ಮಹಾಧ್ಯಾತ ಬಲವಿಜ್ಞಾತ ವಿಖ್ಯಾತ ॥ ಗರಳ ಭುಗ್ಭವರೋಗಭೇಷಜ । ಸ್ವರವರಣವೇದಸ್ಥ ಜೀವೇ- । ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮಾ ॥ ೬ ॥

ಅನಿಲ ಸ್ಥಿತಿ ವೈರಾಗ್ಯನಿಧಿ ರೋ- । ಚನ ವಿಮುಕ್ತಗಣಂಪ ದಶ
ಮತಿ । ಅನಿಮಿಷೇಶಾಸಿದ್ರ ಶುಚಿ ಸತ್ವಾತ್ಮಕಶರೀರಾ ॥ ಅಣುಮಹದ್ರೂ
ಪಾತ್ಮಕಾವೃತ । ಹನುಮದಾದ್ಯವತಾರ ಪದ್ಮಾ । ಸನಪದವಿಸಂಪ್ರಾಪ್ತ
ಪರಿಸರ ಅಖಿಳಾಕ್ಷಸವಾ ॥ ೭ ॥

ಮಾತರಿಶ್ವಬ್ರಹ್ಮರು ಜಗ- । ನ್ಮಾತೆಗಧಮಾಧೀನರೆನಿಪರು । ಶ್ರೀ
ತರುಣಿವಲ್ಲಭನು ಯಿನಾರ್ವರೊಳಾವಕಾಲದಲಿ ॥ ನೀತ ಭಕ್ತಿಜ್ಞಾನಬಲ
ರೂ । ಪಾತಿಶಯದಿಂದಿದ್ದು ಚೇತನಾ- । ಚೇತನಗಳೊಳು ವ್ಯಾಪ್ತರೆನಿ
ಪರು ತತ್ತದಾಹ್ವಯದಿ ॥ ೮ ॥

ಸರಸ್ವತೀ ವೇದಾತ್ಮಿಕಾ ಭುಜಿ । ನರಹರೀ ಗುರುಭಕ್ತಿ ಬ್ರಾಹ್ಮೀ ।
ಪರಮಸುಖ ಬಲಪೂರ್ಣ ಶ್ರದ್ಧಾಪ್ರೀತಿ ಗಾಯತ್ರೀ ॥ ಗರುಡಶೇಷರ
ಜನನಿ ಶ್ರೀ ಸಂ- । ಕರುಷಣನ ಜಯಾತನುಜೆ ವಾಣೀ । ಕರಣನೀಯಾ
ಮಕ ಚತುರ್ದಶಭುವನ ಸನ್ಮಾನ್ಯ ॥ ೯ ॥

ಕಾಳಿ ದ್ರೌಪದಿ ಕಾಶಿಜಾ । ಪಾಂಚಾಲಿ ಶಿವಕನ್ಯೇಂದ್ರಸೇನಾ ।
ಕಾಲಮಾನೀಚಂದ್ರ ವಿದ್ಯನ್ನಾಮ ಭಾರತಿಗೆ ॥ ಫಾಳಿಬ್ರಹ್ಮರ ಯುವತಿ
ಯರು ಯೇ- । ಳೀಳು ಐವತ್ತೊಂದು ಗುಣದಿಂ । ಕೀಳರೆನಿಪರು ತಮ್ಮ
ಪತಿಗಳಿಗಿಂದಲಾವಾಗಾ ॥ ೧೦ ॥

ಹರಿಸಮಾರಾವೇಶ ನರ ಸಂ- । ಕರುಷಣಾವೇಶಯುತ ಲಕ್ಷ್ಮಣ ।
ಪರಮಪುರುಷನ ಶುಕ್ಲಕೇಶಾವೇಶ ಬಲರಾಮ ॥ ಹರ ಸದಾಶಿವ ತಪ
ರಹಂಕೃತು । ಮರುತಯುಕ್ತ ಶುಕೋರ್ಧ್ವಪಟ ತ- । ತ್ಪುರುಷ ಜೈಗೀ
ಷ್ಟೌರ್ವ ದ್ರೋಣಿ ವ್ಯಾಧ ದೂರ್ವಾಸ ॥ ೧೧ ॥

ಗರುಡ ಶೇಷ ಶಶಾಂಕದಳಶೇ- । ಖರರು ತಮ್ಮೊಳು ಸಮರು
ಭಾರತಿ । ಸರಸಿಜಾಸನ ಪತ್ನಿಗಧಮರು ನೂರು ಗುಣದಿಂದಾ ॥ ಹರಿ
ಮಡದಿ ಜಾಂಬವತಿಯೊಳು ಶ್ರೀ । ತರುಣಿಯಾವೇಶವಿಹುದೆಂದಿಗು ।
ಕೊರತೆಯೆನಿಪರು ಗರುಡಶೇಷರಿಗೈವರೈದುಗುಣಾ ॥ ೧೨ ॥

ನೀಲ ಭದ್ರಾ ಮಿತ್ರವಿಂದಾ । ಮೇಲೆನಿಪ ಕಾಳಿಂದಿ ಲಕ್ಷಣ । ಜಾಲಿ ಯರಿಗಿಂದಧಮ ವಾರುಣಿ ಸೌಪರಣಿ ಗಿರಿಜಾ ॥ ಶ್ರೀಲಕುಮಿಯುತ ರೇವತೀ ಶ್ರೀ । ಮೂಲರೂಪದಿ ಪ್ರಿಯಳೆನಿಸಳು । ಶೈಲಜಾದ್ಯರು ದಶ ಗುಣಾಧಮ ತಮ್ಮ ಪತಿಗಳಿಗೆ ॥ ೧೩ ॥

ನರಹರಿಯ ಆವೇಶಸಂಯುತ । ನರ ಪುರಂದರ ಗಾಧಿ ಕುಶ ಮಂ- । ದರದ್ಯುಮ್ನ ವಿಕುಕ್ಷಿ ವಾಲೀ ಯಿಂದ್ರನವತಾರಾ ॥ ಭರತ ಬ್ರಹ್ಮ ವಿಷ್ವ ಸಾಂಬ ಸು- । ದರುಶನ ಪ್ರದ್ಯುಮ್ನ ಸನಕಾ- । ದ್ಯರೊಳಗಿಪ್ಪ ಸನತ್ಕು ಮಾರನು ಷಣ್ಮುಖನು ಕಾಮಾ ॥ ೧೪ ॥

ಈರಯಿದುಗುಣಕಡಿಮೆ ಪಾರ್ವತಿ । ವಾರುಣೀಯರಿಗಿಂದ್ರಕಾಮ ಶ- । ರೀರಮಾನಿ ಪ್ರಾಣದಶಗುಣನವರ ಶಕ್ರನಿಗೆ ॥ ಮಾರಜಾ ರತಿ ದಕ್ಷ ಗುರುವೃ- । ತ್ರಾರಿಜಾಯಾಶಚಿ ಸ್ವಯಂಭುವ- । ರಾರುಜನಸಮಪ್ರಾಣ ಗವರರು ಹತ್ತು ಗುಣದಿಂದಾ ॥ ೧೫ ॥

ಕಾಮಪುತ್ರನಿರುದ್ಧ ಸೀತಾ । ರಾಮನಾನುಜ ಶತ್ರುಹನ ಬಲ- । ರಾಮನಾನುಜಪೌತ್ರನನಿರುದ್ಧನೊಳಗನಿರುದ್ಧಾ ॥ ಕಾಮಭಾರ್ಯಾ ರುಗ್ಮವತಿ ಸ- । ನ್ನಾಮಲಕ್ಷ್ಮಣಳೆನಿಸುವಳು ಪೌ- । ಲೋಮಿ ಚಿತ್ರಾಂಗ ದೆಯು ತಾರಾದ್ಯೆರಡು ಪೆಸರುಗಳೂ ॥ ೧೬ ॥

ತಾರನಾಮಕ ತ್ರೈತೆಯೊಳು ಸೀ- । ತಾರಮಣನಾರಾಧಿಸಿದನು ಸ- । ಮೀರಯುಕ್ತೋದ್ಧವನು ಕೃಷ್ಣಗೆ ಪ್ರಿಯನೆನಿಸಿದನೂ ॥ ವಾರಿಜಾಸನ ಯುಕ್ತ ದ್ರೋಣನು । ಮೂರುಯಿಳೆಯೊಳು ಬೃಹಸ್ಪತಿಗವ- । ತಾರವೆಂಬರು ಮಹಾಭಾರತ ತಾತ್ಪರಿಯದೊಳಗೆ ॥ ೧೭ ॥

ಮನುಮುಖಾದ್ಯರಿಗಿಂದ ಪ್ರವಹಾ । ಗುಣಗಳದ್ವಯನೀಚನೆನಿ ಸುವ- । ನಿನಶಶಾಂಕರು ಧರ್ಮಮಾನವಿಯೆರಡು ಗುಣದಿಂದಾ ॥ ಕನಿ ಯರೆನಿಪರು ಪ್ರವಹಗಿಂದಲಿ । ದಿನಪ ಶಶಿ ಯಮಧರ್ಮರೂಪಗ- । ಳನುದಿನದಿ ಚಿಂತಿಪುದು ಸಂತರು ಸರ್ವಕಾಲದಲಿ ॥ ೧೮ ॥

ಮಾರುತನಾವೇಶಯುತ ಧರ್ಮಜ । ಕರಡಿ ವಿದುರನು ಸತ್ಯಜಿತು ವೀ- । ರೆರಡುಧರ್ಮನ ರೂಪ ಬ್ರಹ್ಮಾವಿಷ್ಟ ಸುಗ್ರೀವಾ ॥ ಹರಿಯ ರೂಪಾವಿಷ್ಟಕರ್ಣನು । ತರಣಿಗೆರಡವತಾರ ಚಂದ್ರಮ । ಸುರಪನಾವೇಶಯುತ ನಂಗದನೆನಿಸಿಕೊಳುತಿಪ್ಪಾ ॥ ೧೯ ॥

ತರಣಿಗಿಂದಲಿ ಪಾದ ಪಾದರೆ । ವರುಣ ನೀಚನು ಮಹಾಭಿಷಕ್ದರ- । ದುರ ಸುಷೇಣನು ಶಂತನುವು ನಾಲ್ವರು ವರುಣರೂಪಾ ॥ ಸುರಮುನೀ ನಾರದನು ಕಿಂಚಿ- । ತ್ತೊರತೆ ವರುಣಗೆ ಅಗ್ನಿ ಭೃಗುವಜ- । ಗೊರಳಪತ್ನಿ ಪ್ರಸೂತಿ ಮೂವರು ನಾರದನಿಗಧಮಾ ॥ ೨೦ ॥

ನೀಲ ಧೃಷ್ಟದ್ಯುಮ್ನ ಲವನೀ । ಲೀಲಿಹಾನನ ರೂಪಗಳು ಭೃಗು । ಕಾಲಿಲೊದ್ದದರಿಂದ ಹರಿಯ ವ್ಯಾಧನೆನಿಸಿದನೂ ॥ ಏಳುಋಷಿಗಳಿಗುತ್ತಮರು ಮುನಿ । ಮೌಳಿನಾರದಗಧಮ ಮೂವರು । ಫಾಳಿಯುತಪ್ರಹ್ಲಾದ ಬಾಹ್ಲಿಕರಾಯನೆನಿಸಿದನೂ ॥ ೨೧ ॥

ಜನಪಕರ್ಮಜರೊಳಗೆ ನಾರದ । ಮುನಿಯನುಗ್ರಹಬಲದಿ ಪ್ರಹ್ಲಾ- । ದ ನಳ ಭೃಗುಮುನಿ ದಕ್ಷಪತ್ನಿಗೆ ಸಮನೆನಿಸಿಕೊಂಬಾ ॥ ಮನುವಿವಸ್ವಾನ್ಗಾಧಿಜೇರ್ವರು । ಅನಳಗಿಂದಲಿ ಕಿಂಚಿತಾಧಮ । ಗಣೆಯೆನಿಸುವರು ಸಪ್ತಋಷಿಗಳಿಗೆಲ್ಲಕಾಲದಲಿ ॥ ೨೨ ॥

ಕಮಲಸಂಭವ ಭವರೆನಿಪ ಸಂ- । ಯಮಿಮರೀಚಿಯು ಅತ್ರಿಯಂಗಿರ । ಸುಮತಿ ಪುಲಹ ಕ್ರತು ವಸಿಷ್ಠ ಪುಲಸ್ತ್ಯ ಮುನಿ ಸ್ವಾಹಾ- ॥ ರಮಣಗಧಮರು ಮಿತ್ರನಾಮಕ । ದ್ಯುಮಣಿ ರಾಹೂಯುಕ್ತ ಭೀಷ್ಮಕ । ಯಮಳರೂಪನು ತಾರನಾಮಕನೆನಿಸಿ ತ್ರೈತೆಯೊಳು ॥ ೨೩ ॥

ನಿಋತಿಗೆರಡವತಾರ ದುರ್ಮುಖ । ಹರಯುತಘಟೋತ್ಕಚನು ಪ್ರಾವಹಿ । ಗುರುಮಡದಿ ತಾರಾ ಸಮರು ಪರ್ಜನ್ಯಗುತ್ತಮರು ॥ ಕರಿಗೊರಳ ಸರಿಯುಕ್ತಭಗದ- । ತ್ತರನು ಕತ್ಥನ ಧನಪ ರೂಪಗ- । ಳೆರಡು ವಿಘ್ನಪ ಚಾರುದೇಷ್ಣನು ಅಶ್ವಿನಿಗಳ ಸಮಾ ॥ ೨೪ ॥

ದ್ರೋಣ ಧ್ರುವ ದೋಷಾರ್ಕನಗ್ನಿ । ಪ್ರಾಣದ್ಯು ವಿಭಾವಸುಗ
ಳೆಂಟು ಕೃ- । ಶಾನುಶ್ರೀಪ್ಸದ್ಯನಾಮ ವಸು ಭೀಷ್ಮಾರ್ಯ ಬ್ರಹ್ಮಯುತಾ॥
ದ್ರೋಣನಾಮಕ ನಂದಗೋಪ ಪ್ರ- । ಧಾನನಗ್ನಿಯನುಳಿದುಯೇಳು ಸ- ।
ಮಾನರೆನಿಪರು ತಮ್ಮೊಳಗೆ ಜ್ಞಾನಾದಿ ಗುಣದಿಂದಾ ॥ ೨೫ ॥

ಭೀಮ ರೈವತ ಪ್ರೋಜಜೈಕಪ- । ದಾಮಹನ್ ,ಬಹುರೂಪಕನು
ಭವ । ವಾಮ ವುಗ್ರ ವೃಷಾಕಪಿಯಹಿರ್ಬುಧ್ನಿಯೆ ನುತಿಪ್ಪಾ ॥ ಈ ಮಹಾ
ತ್ಮರ ಮಧ್ಯದೊಳಗೆ ವು- । ಮಾಮನೋಹರನುತ್ತಮನು ದಶ । ನಾಮ
ಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದೂ ॥ ೨೬ ॥

ಭೂರ್ಯಜೈಕಪದಾಹ್ವಹಿರ್ಬು- । ಧ್ನೀರಯಿದು ರುದ್ರಗಣಸಂ
ಯುತ । ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷನಾಮಕನೂ ॥ ಸೂರಿಕೃಪ
ವಿಷ್ಕಂಭ ಸಹದೇ- । ವಾರಣಾಗ್ರಣಿ ಸೋಮದತ್ತನು । ತಾ ರಚಿಸಿದ
ದ್ವಿರೂಪ ಧರೆಯೊಳು ಪತ್ರತಾಪಕನೂ ॥ ೨೭ ॥

ದೇವಶರ್ಮನುರುಕ್ರಮಾ ವಿ- । ತ್ರಾ ವರುಣ ಪರ್ಜನ್ಯಭಗ ಪೂ- ।
ಷಾ ವಿವಸ್ವನು ಸವಿತೃಧಾತಾ ವರ್ಯಮ ತ್ವಷ್ಟಾ ॥ ದೇವಕೀಸುತನಲ್ಲಿ
ಸವಿತೃ ವಿ- । ಭಾವಸೂಸುತ ಭಾನುಯೆನಿಸುವ । ಜ್ಯಾವನಪಯುತ ವೀರ
ಸೇನನು ತ್ವಷ್ಟೃನಾಮಕನೂ ॥ ೨೮ ॥

ಎರಡಧಿಕದಶಸೂರ್ಯರೊಳು ಮೂ- । ರೆರಡುಜನರುತ್ತಮ ವಿವ
ಸ್ವನು । ವರುಣಶಕ್ರನುರುಕ್ರಮನು ಪರ್ಜನ್ಯಮಿತ್ರಾಖ್ಯಾ । ಮರುತನಾ
ವೇಶಯುತ ಪಾಂಡೂ । ವರಪರಾವಹನೆಂದೆನಿಪ ಕೇ- । ಸರಿಮೃಗಪ
ಸಂಪಾತಿ ಶ್ವೇತ ತ್ರಯರು ಮರುದಂಶ ॥ ೨೯ ॥

ಪ್ರತಿಭವಾತನು ಚೇಕಿತಾನ ವಿ- । ಪೃಥುವೆನಿಸುವನು ಸೌಮ್ಯ ಮಾ
ರುತ । ವಿತತ ಸರ್ವೋತ್ತುಂಗ ಗಜನಾಮಕರು ಪ್ರಾಣಾಂಶಾ ॥ ದ್ವಿತಿ
ಯಪಾನಗವಾಕ್ಷಗವಯನು । ತೃತಿಯ ವ್ಯಾನ ವುದಾನ ವೃಷಪ- । ರ್ವತಾ
ಳಶರ್ವತ್ರಾತ ಗಂಧಸುಮಾದನರು ಸಮನ ॥ ೩೦ ॥

ಐವರೊಳಗೀ ಕುಂತಿಭೋಜನು। ಆವಿನಾಮಕ ನಾಗಕೃಕಲನು। ದೇವದತ್ತಧನಂಜಯರು ಅವತಾರವರ್ಜಿತರೂ ॥ ಆವಹೋದ್ವಹ ವಿವಹಸಂವಹ। ಪ್ರಾವಹೀಪತಿ ಮರುತ ಪ್ರವಹನಿ-। ಗಾವಕಾಲಕು ಕಿಂಚಿತಧಮರು ಮರುದ್ಗಣಗಳೆಲ್ಲ ॥ ೩೧ ॥

ಪ್ರಾಣಪಾನವ್ಯಾನೋದಾನಸ-। ಮಾನರೈವರನುಳಿದು ಮರುತರು। ಊನರೆನಿಪರು ಹತ್ತುವಿಶ್ವೇದೇವರಿವರಿಂದಾ ॥ ಸೂನುಗಳು ಯೆನಿಸುವರು ಐವರು। ಮಾನಿನೀದ್ರೌಪದಿಗೆ ಕೆಲವರು। ಕ್ಷೋಣಿಯೊಳು ಕೈಕೇಯರೆನಿಪರು ಯೆಲ್ಲಕಾಲದಲಿ ॥ ೩೨ ॥

ಪ್ರತಿವಿಂಧ್ಯ ಶ್ರುತಸೋಮ ಶ್ರುತಕೀ-। ರುತಿ ಶತಾನಿಕ ಶ್ರುತಕರ್ಮ ದ್ರೌ-। ಪದಿಕುವರರಿವರೊಳಗೆ ಅಭಿತಾಮ್ರ ಪ್ರಮುಖ ಚಿತ್ರ-॥ ರಥನು ಗೋಪಕಿಶೋರ ಬಲರೆಂ-। ಬತುಲರ್ಗೈಗಂಧರ್ವರಿಂವಲಿ। ಯುತರು ಧರ್ಮ ವೃಕೋವರಾದಿಜರೆಂದು ಕರೆಸುವರೂ ॥ ೩೩ ॥

ವಿವಿದಮ್ಯೆಂದರು ನಕುಲಸಹದೇ-। ವ ವಿಭು ತ್ರಿಶಿಖಾಶ್ವಿನಿಗಳಿವರೊಳು। ದಿವಿಪನಾವೇಶವಿಹುದೆಂದಿಗು ದ್ಯಾವಾಪೃಥ್ವಿಋಭು ॥ ಪವನಸುತ ವಿಷ್ವಕ್ಸೇನನು ಮಾ-। ಕುವರ ವಿಘ್ನಪ ಧನಪ ಮೊದಲಾ-। ದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರೂ ॥ ೩೪ ॥

ಪಾವಕಾಗ್ನಿಕುಮಾರರೆನಿಸುವ। ಚ್ಯಾವನನುಚಥ್ಯಮುನಿ ಚಾಕ್ಷುಷ। ರೈವತ ಸ್ವಾವರೋಚಿಷೋತ್ತಮ ಬ್ರಹ್ಮರುದ್ರೇಂದ್ರಾ॥ ದೇವಧರ್ಮನು ದಕ್ಷನಾಮಕ। ಸಾವರಣಿ ಶಶಿಬಿಂದು ಪೃಥು ಪ್ರೀ। ಯುವ್ರತನು ಮಾಂಧಾತ ಗಯನು ಕಕುಸ್ಥ ದೌಷ್ಯಂತಿ ॥ ೩೫ ॥

ಭರತ ಋಷಭಜ ಹರಿಣಿಜಾ ದ್ವಿಜ। ಭರತ ಮೊದಲಾದಖಿಳರಾಯರೊ-। ಳಿರುತಿಹದು ಶ್ರೀವಿಷ್ಣುಪ್ರಾಣಾವೇಶಪ್ರತಿದಿನದೀ ॥ ವರದಿವಸ್ಪತಿ ಶಂಭುರದ್ಭುತ। ಕರೆಸುವನು ಬಲಿವಿಧೃತ ಧೃತಶುಚಿ। ನೆರೆ ಖಲೂಧೃತಧಾಮ ಮೊದಲಾದಷ್ಟಗಂಧರ್ವಾ ॥ ೩೬ ॥

ಅರಸಹರೆನಿಪ ಕರ್ಮಜರು ವೈಶ್ವಾ- । ನರಗಧಮ ಶತಗುಣದಿ ವಿಷ್ಣೋ- । ಶ್ವರಗೆ ಕಿಂಚಿದ್ಗುಣಕಡಿಮೆ ಬಲಿಮುಖ್ಯಪಾವಕರು ॥ ಶರಭ ಪರ್ಜನ್ಯಾಖ್ಯ ಮೋಘಪ । ತರಣಿಭಾರ್ಯಾಸಂಜ್ಞೆ ಶಾರ್ವರಿ- । ಕರನ ಪತ್ನಿಯು ರೋಹಿಣೀ ಶಾಮಲೆಯು ದೇವಕಿಯೂ ॥ ೩೭ ॥

ಅರಸಿಯೆನಿಸಳು ಧರ್ಮರಾಯಗೆ । ವರುಣಭಾರ್ಯೋಷಾದಿಷ ಟ್ಕರು । ಕೊರತೆಯೆನಿಪರು ಪಾವಕಾದ್ಯರಿಗೆರಡುಗುಣದಿಂದಾ ॥ ಎರಡು ಮೂರ್ಜನರಧಮ ಸ್ವಾಹಾ । ಕರೆಸುವಳುಷಾದೇವಿ ವೈಶ್ವಾ- । ನರನ ಮಡದಿಗೆ ದಶಗುಣಾವರಳಶ್ವಿನೀಭಾರ್ಯಾ ॥ ೩೮ ॥

ಸುದರುಶನ ಶಕ್ರಾದಿಸ ರಯುತ । ಬುಧನು ತಾನಭಿಮನ್ಯುವೆನಿ ಸುವ । ಬುಧನಿಗಿಂದಾಶ್ವಿನೀಭಾರ್ಯಾ ಶಲ್ಯಮಾಗಧರಾ ॥ ಉದರಜೋ ಷಾದೇವಿಗಿಂದಲಿ । ಅಧಮನೆನಿಪ ಶನೈಶ್ಚರನು ಶನಿ- । ಗಧಮ ಪುಷ್ಕರ ಕರ್ಮಪನು ಯೆನಿಸುವನು ಬುಧರಿಂದಾ ॥ ೩೯ ॥

ಉದ್ವಹಾ ಮರುತಾನ್ವಿತ ವಿರಾ- । ಧ ದ್ವಿತಿಯ ಸಂಜಯನು ತುಂಬುರು । ವಿದ್ವದುತ್ತಮ ಜನಮೇಜಯ ತ್ವಷ್ಟೃಯುತ ಚಿತ್ರರಥಾ ॥ ಸದ್ವಿನುತ ದಮಘೋಷಕ ಕಬಂ- । ಧ ದ್ವಯರು ಗಂಧರ್ವ ದನು ಮನು । ಪದ್ಮಸಂಭವಯುತಾಕ್ರೂರ ಕಿಶೋರನೆನಿಸುವನು ॥ ೪೦ ॥

ವಾಯುಯುತ ಧೃತರಾಷ್ಟ್ರ ದಿವಿಜರ । ಗಾಯಕನು ಧೃತರಾಷ್ಟ್ರನ ಕ್ರನು । ರಾಯ ದ್ರುಪದನು ವಹವಿಶಿಷ್ಟಾಹೂಹುಗಂಧರ್ವಾ ॥ ನಾಯಕ ವಿರಾಡ್ವಿವಹಯುತ ಹಾಹಾ- । ದ್ಗೇಯ ವಿದ್ಯಾಧರನೆ ಯುಜಗರ । ತಾ ಯೆನಿಸುವನು ವುಗ್ರಸೇನನೆ ವುಗ್ರಸೇನಾಖ್ಯಾ ॥ ೪೧ ॥

ಬಿಸಜಸಂಭವಯುಕ್ತ ವಿಶ್ವಾ- । ವಸು ಯುಧಾಮನ್ಯುತ್ತಮೋಜ ಸ । ಬಿಸಜಮಿತ್ರಾರ್ಯಮಯುತ ಪರಾವಸುವೆನಿಸುತಿಪ್ಪಾ ॥ ಅಸಮ ಮಿತ್ರಾನ್ವಿತನು ಸತ್ಯಜಿ- । ದ್ವಸುಧೆಯೊಳು ಚಿತ್ರಸೇನನಮೃತಾಂ- । ಧಸರ ಗಾಯಕರೆಂದು ಕರೆಸುವರಾವ ಕಾಲದಲಿ ॥ ೪೨ ॥

ಉಳಿದ ಗಂಧರ್ವರುಗಳೆಲ್ಲರು । ಬಲಿವೊದಲುಗೋಪಾಲರೆನಿಪರು । ಇಳೆಯೊಳಗೆ ಸೈಳೇಂದ್ರಿ ಪಿಂಗಳೆಯುಪ್ಸರಸ್ತ್ರೀಯು ॥ ತಿಲೊತಮೆಯು ಪೂರ್ವದಲಿ ನಕುಲನ । ಲಲನೆ ಪಾರ್ವತಿಯೆನಿಸುವಳು ಗೋ- । ಕುಲದ ಗೋಪಿಯರೆಲ್ಲ ಶಬರೀಮುಖ್ಯರಪ್ಸರರೂ ॥ ೪೩ ॥

ಕೃಷ್ಣವರ್ತ್ಮನ ಸುತರೊಳಗೆ ಶತ । ದ್ವ್ಯಷ್ಟಸಾವಿರಸ್ತ್ರೀಯರಲ್ಲಿಪ್ರ- । ವಿಷ್ಟಳಾಗಿ ರಮಾಂಬ ತತ್ತನ್ನಾಮರೂಪದಲಿ ॥ ಕೃಷ್ಣಮಹಿಷಿಯರೊಳಗೆ ಯಿಪ್ಪಳು । ತ್ವಷ್ಟೃಪುತ್ರಿ ಕಶೇರು ಯಿವರೊಳು । ಶ್ರೇಷ್ಠಳೆನಿಪಳು ವುಳಿದ ಋಷಿಗಣ ಗೋಪಿಕಾಸಮರೂ ॥ ೪೪ ॥

ಸೂನುಗಳು ಯೆನಿಸುವರು ದೇವಕೃ- । ಶಾನುವಿಗೆ ಕ್ರತುಸಿಂಧು ಶುಚಿ ಪವ- । ಮಾನ ಕೌಶಿಕರೈದು ತುಂಬುರು ವೂರ್ವಶೀಶತರೂ ॥ ಮೇನಕೀ ಋಷಿರಾಯರುಗಳಾ- । ಜಾನಸುರರಿಗೆ ಸಮರೆನಿಪರು ಸು- । ರಾಣಕರನಾಖ್ಯಾತ ದಿವಿಜರ ಜನಕರೆನಿಸುವರೂ ॥ ೪೫ ॥

ಪಾವಕರಿಗಿಂದಧಮರೆನಿಸುವ । ದೇವಕುಲಜಾನಾಖ್ಯ ಸುರಗಣ । ಕೋವಿದರು ನಾನಾ ಸುವಿದ್ಯದಿ ಸೋತ್ತಮರ ನಿತ್ಯಾ ॥ ಸೇವಿಪರು ಸದ್ಭಕ್ತಿಪೂರ್ವಕ । ಸ್ವಾವರರಿಗುಪದೇಶಿಸುವರು ನಿ- । ರಾವಲಂಬನ ವಿಮಲ ಗುಣಗಳ ಪ್ರತಿದಿವಸದಲ್ಲಿ ॥ ೪೬ ॥

ಸುರರೊಳಗೆ ವರ್ಣಾಶ್ರಮಗಳಿಂ- । ಬೆರಡುಧರ್ಮಗಳಿಲ್ಲ ತಮ್ಮೊಳು । ನಿರುಪಮರು ಯೆಂದೆನಿಸಿಕೊಂಬರು ತಾರತಮ್ಯದಲಿ ॥ ಗುರುಶಿಷ್ಯತ್ವವು ಈ ಋಷಿಗಳೊಳ- । ಗಿರುತಿಹುದು ಆಜಾನಸುರರಿಗೆ । ಚಿರಪಿತೃಶತಾಧಮರೆನಿಸುವರು ಯೇಳುಜನರುಳಿದೂ ॥ ೪೭ ॥

ಚಿರಪಿತೃಗಳಿಂದಧಮಗಂಧ- । ರ್ವರುಗಳೆನಿಪರು ದೇವನಾಮಕ । ಕೊರತೆಯೆನಿಸುವ ಚಕ್ರವರ್ತಿಗಳಿಂದ ಗಂಧರ್ವ ॥ ನರರೊಳುತ್ತಮರೆನಿಸುವರು ಹ- । ನ್ನೆರಡು ಯೆಂಭತ್ತೆಂಟುಗುಣದಲಿ । ಹಿರಿಯರೆನಿಪರು ಕ್ರಮದಿ ದೇವಾವೇಶಬಲದಿಂದಾ ॥ ೪೮ ॥

ದೇವತೆಗಳಿಂ ಪ್ರೇಷ್ಯರೆನಿಪರು । ದೇವಗಂಧರ್ವರುಗಳವರಿಂ- । ದಾವಕಾಲಕು ಶಿಕ್ಷಿತರು ನರನಾಮಗಂಧರ್ವಾ ॥ ಕೇವಲತಿಸದ್ಭಕ್ತಿಪೂರ್ವಕ । ಯಾವದಿಂದ್ರಿಯಗಳ ನಿಯಾಮಕ । ಶ್ರೀವರನೆ ಯೆಂದರಿತು ಭಜಿಪರು ಮಾನುಷೋತ್ತಮರು ॥ ೪೯ ॥

ಬಾದರಾಯಣ ಭಾಗವತ ಮೊದ- । ಲಾದ ಶಾಸ್ತ್ರಗಳಲ್ಲಿ ಬಹುವಿಧ । ದ್ವಾದಶದಶ ಸುಪಂಚವಿಂಶತಿ ಶತಸಹಸ್ರಯುತಾ ॥ ಭೇದಗಳ ಪೇಳಿದನು ಸ್ತೋತ್ತಮ । ಆದಿತೇಯಾವೇಶಬಲದಿ ವಿ- । ರೋಧಚಿಂತಿಸಬಾರದಿರು ಸಾಧುಜನಸಮ್ಮತವೂ ॥ ೫೦ ॥

ಇವರು ಮುಕ್ತಿಗೆ ಯೋಗ್ಯರೆಂಬರು । ಶ್ರವಣಮನನಾದಿಗಳ ಪರವೋ- । ತ್ಸವದಿ ಮಾಡುತ ಕೇಳಿ ನಲಿಯುತ ಧರ್ಮಕಾಮಾರ್ಥಾ ॥ ತ್ರಿವಿಧಫಲವನಪೇಕ್ಷಿಸದೆ ಶ್ರೀ । ಪವನಮುಖ ದೇವಾಂತರಾತ್ಮಕ । ಪ್ರವರತಮ ಶಿಷ್ಟೇಷ್ಟದಾಯಕನೆಂದು ಸ್ಮರಿಸುವರೂ ॥ ೫೧ ॥

ನಿತ್ಯಸಂಸಾರಿಗಳು ಗುಣದೋ- । ಷಾತ್ಮಕರು ಬ್ರಹ್ಮಾದಿ ದಿವಿಜರ । ಭೃತ್ಯರೆಂಬರು ರಾಜಸೋಪಾದಿಯಲಿ ಹರಿಯೆಂಬಾ ॥ ಕೃತ್ತಿವಾಸನು ಬ್ರಹ್ಮಶ್ರೀವಿ- । ಷ್ಣು ತ್ರಯರು ಸಮ ದುಃಖ ಸುಖ ವೃ- । ತ್ಪತ್ತಿ ವ್ಯತಿ ಭಯ ಪೇಳುವರು ಅವತಾರಗಳಿಗೆ ಸದಾ ॥ ೫೨ ॥

ತಾರತಮ್ಯಜ್ಞಾನವಿಲ್ಲದೆ । ಸೂರಿಗಳ ನಿಂದಿಸುತ ನಿತ್ಯದಿ । ತೋರುತಿಪ್ಪನು ಸುಜನರೋಪಾದಿಯಲಿ ನರರೊಳಗೆ ॥ ಕ್ರೂರಕರ್ಮಾಸಕ್ತರಾಗಿ ಶ- । ರೀರ ಪೋಷಣೆಗೋಸುಗದಿ ಸಂ- । ಚಾರಮಾಳ್ಪರು ಅನ್ಯದೇವತೆ ನೀಚರಾಲಯದೀ ॥ ೫೩ ॥

ದಶಪ್ರಮತಿಯ ಮತಾಬ್ಧಿಯೊಳು ಸುಮ- । ನಸರೆನಿಪ ರತ್ನಗಳನವಲೋ- । ಕಿಸಿ ತೆಗದು ಪ್ರಾಕೃತಸುಭಾಷಾತಂತುಗಳ ರಚಿಸಿ ॥ ಅಸುಪತಿ ಶ್ರೀರಮಣಗೆ ಸಮ- । ರ್ಪಿಸಿದೆ ಸಜ್ಜನರಿದನು ಸಂತೋ- । ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯಾ ॥ ೫೪ ॥

ನಿರುಪಮ ಶ್ರೀವಿಷ್ಣು ಲಕ್ಷ್ಮೀ । ಸರಸಿಜೋದ್ಭವ ವಾಯು ವಾಣೀ । ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣಾ ॥ ಗುರು ಬೃಹ ಸ್ಪತಿ ಪ್ರವಹ ಸೂರ್ಯನು । ವರುಣ ನಾರದ ವಹ್ನಿ ಸಪ್ತಾಂ- । ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಹಾ ಬುಧನೂ ॥ ೫೫ ॥

ತರಣಿತನಯುಶನೈಶ್ಚರನು ಪು- । ಷ್ಕರನಜಾನಜ ಚಿರಪಿತರು ಗಂ- । ಧರುವರೀರ್ವರು ದೇವಮಾನುಷ ಚಕ್ರವರ್ತಿಗಳು ॥ ನರರೊಳು ತ್ತಮ ಮಧ್ಯಮಾಧಮ । ಕರೆಸುವರು ಮಧ್ಯೋತ್ತಮರು ಯಿಾ- । ರೆರಡು ಜನ ಕೈವಲ್ಯ ಮಾರ್ಗಸ್ಥರೆಂದಾನಮಿಪೇ ॥ ೫೬ ॥

ಸಾರಭಕ್ತಿಜ್ಞಾನದಿಂ ಬೃಹ- । ತ್ತಾರತಮ್ಯವನರಿತು ಪಠಿಸುವ । ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸೀ ॥ ಕಾರುಣಿಕ ಮರು ತಾಂತರಾತ್ಮಕ । ಮಾರರಮಣ ಜಗನ್ನಾಥ ವಿಟ್ಠಲ । ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಗಳರಿತೂ ॥ ೫೭ ॥

ಅಂತು ಸಂಧಿ ೨೧ಕ್ಕೆ ಪದ ೬೮೫ಕ್ಕೆ ಬೃಹತ್ತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೨೨. ಸಕಲದುರಿತನಿವಾರಣಸಂಧಿ.

### (ಭಕ್ತಾಪರಾಧಸಹಿಷ್ಣುಸಂಧಿ.)

ತನ್ನ ಚರಣಾರವಿಂದ ಉಪಾಸನಾ ಮಾಡತಕ್ಕ ಭಕ್ತರು ನಡಿಯುತಕ್ಕ ಕ್ರಮದಲ್ಲಿ ವ್ಯತ್ಯಾಸ ಬಂದಾಗ್ಯೂ ಪರಮಾತ್ಮನು ಅಂಥವರ ಅಪರಾಧ ಸಹನ ಮಾಡುತ್ತಾನೆಂದು ಅನೇಕ ದೃಷ್ಟಾಂತಗಳನ್ನು ಹೇಳುತ್ತಾರೆ



॥ ಶ್ರೀಪದ್ಮನಾಭಾಯ ನಮಃ ॥

ರಾಗ ಶಂಕರಾಭರಣ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀಲಕುಮಿಯೊಲ್ಲಭಗೆ ಸಮ ಕರು- । ಣಾಳುಗಳ ನಾ ಕಾಣೆ ನೆಲ್ಲಿ ಕು- । ಚೇಲನವಲಿಗೆ ಮೆಚ್ಚಿ ಕೊಟ್ಟನು ಸಕಲ ಸಂಪದವಾ ॥ ಕೇಳಿ ದಾಕ್ಷಣ ವಸ್ತ್ರಗಳ ಪಾಂ- । ಚಾಲೆಗಿತ್ತನು ದೈತ್ಯನುದರವ । ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರಾ ॥ ೧ ॥

ದೇವಶರ್ಮಾಹ್ವಯ ಕುಟುಂಬಕೆ । ಜೀವನೋಪಾಯವನು ಕಾಣದೆ। ದೇವದೇವ ಶರಣ್ಯ ರಕ್ಷಿಸು ರಕ್ಷಿಸೆನೆ ಕೇಳಿ॥ ತಾನೊಲಿದು ಪಾಲಿಸಿದ ಸೌಖ್ಯ ಕೃ- । ಪಾವಲೋಕನದಿಂದೆ ಈತನ । ಸೇವಿಸದೆ ಸೌಖ್ಯಗಳ ಬಯಸುವರಲ್ಪಮಾನವರೂ ॥ ೨ ॥

ಶ್ರೀನಿವಾಸನ ಪೋಲ್ವ ಕರುಣಿಗ- । ಳೀನಳಿನಜಾಂಡದೊಳು ಕಾಣೆ ಪ್ರ- । ವೀಣರಾದವರರಸಿ ನೋಳ್ಪುದು ಶ್ರುತಿಪುರಾಣದೊಳೂ ॥ ದ್ರೋಣ ಭೀಷ್ಮ ಕೃಪಾದಿಗಳು ಕುರು । ಸೇನೆಯೊಳಗಿರಲವರವಗುಣಗ- । ಳೀನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯಾ ॥ ೩ ॥

ಚಂಡವಿಕ್ರಮ ಚಕ್ರಶಂಕವ । ತೊಂಡಮಾನನೃಪಾಲಗಿತ್ತನು । ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿದಾ ॥ ಮಂಡೆಯೊಡೆದಾ ಕಾಶರಾಜನ । ಹೆಂಡತಿಯ ನುಡಿ ಕೇಳಿ ಮಗಳಿಗೆ ॥ ಗಂಡನೆನಿಸಿದ ಗಹನಮಹಿಮ ಗದಾಬ್ಜಧರಪಾಣಿ ॥ ೪ ॥

ಗೌತಮನ ನಿಜಪತ್ನಿಯನು ಪುರು- । ಹೂತನೈದಿರೆ ಕಾಯ್ದು ವೃತ್ರನ । ಘಾತಿಸಿದ ಪಾಪವನು ನಾಲ್ಕು ವಿಭಾಗ ಮಾಡಿದನೂ ॥ ಶಾತ ಕುಂಭಾತ್ಮಕ ಕಿರೀಟವ । ಕೈತವದಿ ಕದ್ದೊಯ್ದ ಯಿಂದ್ರಾ- । ರಾತಿ ಬಾಗಿಲ ಕಾಯ್ದ ಭಕ್ತತ್ವೇನ ಸ್ವೀಕರಿಸಿ ॥ ೫ ॥

ನಾರನಂದವ್ರಜದ ಸ್ತ್ರೀಯರ । ಜಾರಕರ್ಮಕೆ ವಲಿಯುತಜ ಸುಕು- । ಮಾರನೆನಿಸಿದ ನಂದಗೋಪಗೆ ನಳಿನಭವಜನಕಾ ॥ ವೈರವ ರ್ಜಿತ ದೈತ್ಯರನು ಸಂ- । ಹಾರಮಾಡಿದ ವಿಪಗಮನ ಪೆಗ- । ಲೇರಿದನು ಗೋಪಾಲಕರ ವೃಂದಾವನದೊಳಂದು ॥ ೬ ॥

ಶ್ರೀಕರಾರ್ಚಿತ ಪಾದಪಲ್ಲವ । ಗೋಕುಲದ ಗೊಲ್ಲತಿಯರೊಲಿ ಸಿದ । ಪಾಕಶಾಸನಪೂಜ್ಯ ಗೋಗೋವತ್ಸಗಳ ಕಾಯ್ದ ॥ ಓಕರಿಸಿ ಗುರು ಪತಿಯ ಭೋಜನ । ಸ್ವೀಕರಿಸಿದನು ವಿದುರನೌತನ । ಬಾಕುಲಿಕನಂದ ದಲಿ ತೋರಿದ ಭಕ್ತವತ್ಸಲನೂ ॥ ೭ ॥

ಪುತ್ರನೆನಿಸಿದ ನಂದಗೋಪಗೆ । ಭರ್ತೃವೆನಿಸಿದ ವ್ರಜದ ನಾರಿಯ- । ರುಕ್ತಿಲಾಲಿಸಿ ಪರ್ವತವ ನೆಗಹಿದ ಕೃಪಾಸಾಂದ್ರಾ । ಶತ್ರುತಾಪನ ಯಜ್ಞ ಪುರುಷನ । ಪುತ್ರಿಯರ ತಂದಾಳ್ದ ತ್ರಿಜಗ- । ದ್ಧಾತ್ರ ಮಂಗಳಗಾತ್ರ ಪರ ಮಪವಿತ್ರ ಸುರಮಿತ್ರ ॥ ೮ ॥

ರೂಪನಾಮವಿಹೀನ ಗರ್ಗಾ- । ರೋಪಿತ ಸುನಾಮದಲಿ ಕರೆಸಿದ । ವ್ಯಾಪಕ ಪರಿಚ್ಛಿನ್ನರೂಪದಿ ತೋರ್ದ ಲೋಕರಿಗೆ ॥ ದ್ವಾಪರಾಂತ್ಯದಿ ದೈತ್ಯರನ ಸಂ- । ತಾಪಗೊಳಿಸುವೆನೆಂದು ಶ್ವೇತ- । ದ್ವೀಪಮಂದಿರನವ ತರಿಸಿ ಸಲಹಿದನು ತನ್ನವರ ॥ ೯ ॥

ಶ್ರೀವಿರಿಂಚಾದ್ಯಮರಸುತ ನಾ- । ನಾವತಾರವ ಮಾಡಿ ಸಲಹಿದ । ದೇವತೆಗಳನು ಋಷಿಗಳನು ಕ್ಷಿತಿಪರನು ಮಾನವರಾ ॥ ಸೇವೆಗಳ ಕೈ ಕೊಂಡು ಫಲಗಳ- । ನೀವ ನಿತ್ಯಾನಂದಮಯ ಸು- । ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ॥ ೧೦ ॥

ದುಷ್ಟದಾನವಹರಣ ಸರ್ವೋ- । ತ್ಕೃಷ್ಟ ಸದ್ಗುಣಭರಿತ ಭಕ್ತಾ- । ಭೀಷ್ಟದಾಯಕ ಭಯವಿನಾಶಕ ವಿಗತಭಯಶೋಕಾ ॥ ನಷ್ಟತುಷ್ಟಿಗಳಿಲ್ಲ ಸೃಷ್ಟ್ಯ- । ದ್ಯಷ್ಟಕರ್ತೃಸಿಗಾವಕಾಲದಿ । ಹೃಷ್ಟನಾಗುವ ಸ್ಮರಣೆ ಮಾತ್ರದಿ ಹೃದ್ಗುಹಾವಾಸಿ ॥ ೧೧ ॥

ಹಿಂದೆ ಪ್ರಳಯೋದಕದಿ ತಾವರೆ । ಕಂದನಂಜಿಸಿ ಕಾಯ್ದ ತಲೆ ಯೊಳು । ಬಾಂದೊರೆಯ ಪೊತ್ತವಗೊಲಿದು ಪರಿಯಂಕ ಪದವಿತ್ತಾ ॥ ವಂದಿಸಿದ ವೃಂದಾರಕರ ಸ- । ದ್ವೃಂದಕುಣಿಸಿದ ಸುಧೆಯ ಕರುಣಾ । ಸಿಂಧು ಕಮಲಾಕಾಂತ ಬಹುನಿಶ್ಚಿಂತ ಜಯವಂತಾ ॥ ೧೨ ॥

ಸತ್ಯಸಂಕಲ್ಪಾನುಸಾರ ಪ್ರ- । ವರ್ತಿಸುವ ಪ್ರಭು ತನಗೆ ತಾನೇ । ಭೃತ್ಯನೆನಿಸುವ ಭೋಕ್ತೃಭೋಗ್ಯ ಪದಾರ್ಥದೊಳಗಿದ್ದು ॥ ತತ್ತದಾಹ್ವ ಯನಾಗಿ ತರ್ಪಕ । ತೃಪ್ತಿಬಡಿಸುವ ತತ್ವಪತಿಗಳ । ಮತ್ತರಾದಸುರರ್ಗೆ ಅಸಮಿಾಚೀನಫಲವೀವಾ ॥ ೧೩ ॥

ಬಿಟ್ಟಗಳ ನೆವದಿಂದಲಾಗಲಿ । ಹೊಟ್ಟೆಗೋಸುಗವಾದಡಾಗಲಿ । ಕೆಟ್ಟರೋಗ ಪ್ರಯುಕ್ತವಾಗಲಿ ಯಣಕದಿಂದೊಮ್ಮೆ ॥ ನಿಟ್ಟುಸುರಿನಿಂ ಬಾಯ್ದೆರದು ಹರಿ । ವಿಟ್ಠಲಾ ಸಲಹೆಂದೆನಲು ಕೈ- । ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕತರನ ॥ ೧೪ ॥

ಈ ವಸುಂಧರೆಯೊಳಗೆ ಶ್ರೀಭೂ- । ದೇವಿಯರಸನ ಸುಗುಣಕ ರ್ಮಗ- । ಳಾವ ಬಗೆಯಿಂದಾದಡಾಗಲಿ ಕೀರ್ತಿಸುವ ನರರ ॥ ಕಾವ ಕಮಲದಳಾಯತಾಕ್ಷ ಕೃ- । ಪಾವಲೋಕನದಿಂದ ಕಪಿ ಸು- । ಗ್ರೀವ ಗೊಲಿದಂದದಲಿ ಯೊಲಿದಭಿಲಾಷೆ ಪೂರೈಪಾ ॥ ೧೫ ॥

ಚೇತನಾಂತರ್ಯಾಮಿ ಲಕ್ಷ್ಮೀ । ನಾಥ ಕರ್ಮಗಳನುಸರಿಸಿ ಜನಿ- । ತೋಥವಿಷ್ಣೋ ಎಂಬ ಶ್ರುತಿಪ್ರತಿಪಾದ್ಯನೆಮ್ಮೊಡನೆ ॥ ಜಾತನಾಗುವ ಜನ್ಮರಹಿತಾ- । ಕೂತಿನಂದನ ಭಕ್ತರಿಂದಾ- । ಹೂತನಾಗಿ ಮನೋರಥವ ಬೇಡಿಸಿಕೊಳದಲೀವ ॥ ೧೬ ॥

ನೃಪತುಯೆನಿಸುವ ಮನುಜರೊಳು ಸುರ । ಋಷಭನಿಂದ್ರಿಯಗಳೊಳು ತತ್ತ- । ದ್ವಿಷಯಗಳ ಭುಂಜಿಸುವ ಪೋತಾಹ್ವಯನು ತಾನಾಗೀ ॥ ವೃಷರಹಿತ ವೇದದೊಳು ಋತುಸತು । ಪೆಸರಿನಿಂದಲಿ ಕರೆಸುತ ಜಗ- । ತ್ತ್ರಸವಿತ ನಿರಂತರದಿ ಸಂತೈಸುವನು ಭಕತರನು ॥ ೧೭ ॥

ಅಬ್ಜಭವಪಿತ ಜಲಧರಾದ್ರಿಯೊ- । ಳಬ್ಜಗೋಜಾದ್ರಿಜನೆನಿಸಿ ಜಲ- । ದುಬ್ಬಳೀ ಪೀಯೂಷ ತಾವರೆ ಶ್ರೀ ಶಶಾಂಕರೊಳು ॥ ಕಬ್ಬು ಕದಳಿ ಲತಾ ತೃಣ ದ್ರುಮ । ಹೆಬ್ಬಾಗೆಯು ಮಾಡುತಿಹ ಗೋಜನು । ಯಿಬ್ಬಗೆಯ ಪ್ರತಿಕದೊಳು ಮಣಿ ಮೃಗ ಸೃಜಿಪನದ್ರಿಜನೂ ॥ ೧೮ ॥

ಶ್ರುತಿವಿನುತ ಸರ್ವತ್ರದಲಿ ಭಾ- । ರತಿರಮಣನೊಳಗಿದ್ದು ತಾ ಶುಚಿ- । ಷತುವೆನಿಸಿ ಜಡಚೇತನರನು ಪವಿತ್ರಮಾಡುತಿಹ ॥ ಅತುಳಮಹಿಮಾನಂತ ರೂಪಾ- । ಚ್ಯುತನೆನಿಸಿ ಚಿದ್ದೇಹದೊಳು ಪ್ರಾ- । ಕೃತಪುರುಷನಂದದಲಿ ನಾನಾಚೇಷ್ಟೆಗಳ ಮಾಳ್ಪ ॥ ೧೯ ॥

ಅತಿಥಿಯೆನಿಸುವನನ್ನಮಯ ಭಾ- । ರತಿರಮಣನೊಳು ಪ್ರಾಣಮಯ ಪ್ರಾ- । ಕೃತ ವಿಷಯ ಚಿಂತನೆಯ ಮಾಡಿಸುವನು ಮನೋಮಯನು ॥ ಯತನ ವಿಜ್ಞಾನಮಯ ಬರಲದ । ಜತನಮಾಡಿಸಿಯಾತ್ಮಜಾಯಾ । ಸುತರ ಸಂಗದಿ ಸುಖವನೀವಾನಂದಮಯನೆನಿಸಿ ॥ ೨೦ ॥

ಇನಿತು ರೂಪಾತ್ಮನಿಗೆ ದೋಷಗ- । ಳೆನಿತು ಬಪ್ಪದು ಪೇಳಿರೈ ಬ್ರಾ- । ಹ್ಮಣಕುಲೋತ್ತಮರಾದವರು ನಿಷ್ಕಪಟಬುದ್ಧಿಯಲಿ ॥ ಗುಣನಿಯಾಮಕ ತತ್ತ್ವದಾಹ್ವಯ- । ನೆನಿಸಿ ಕಾರ್ಯವ ಮಾಳ್ಪ ದೇವನ । ನೆನದಮಾತ್ರದಿ ದೋಷರಾಶಿಗಳೆಲ್ಲ ಕೆಡುತಿಹವೂ ॥ ೨೧ ॥

ಕುಸ್ಥನೆನಿಸುವ ಭೂಮಿಯೊಳು ಆ- । ಶಸ್ಥನೆನಿಸುವ ದಿಗ್ವಲಯ ದೊಳು । ಖಸ್ಥನೆನಿಪಾಕಾಶದೊಳು ಪೊಬ್ಬೊಬ್ಬರೊಳಗಿದ್ದು ॥ ವ್ಯಸ್ತನೆನಿಸುವ ಸರ್ವರೊಳಗೆ ಸ- । ಮಸ್ತನೆನಿಸುವ ಬಳಿಯಲಿದ್ದು ವು- । ಪಸ್ಥನೆನಿಪ ನಿಷೂದನ ವಿಶುದ್ಧಾತ್ಮ ಲೋಕದೊಳು ॥ ೨೨ ॥

ಜ್ಞಾನದನುವೆಂದೆನಿಪ ಶಾಸ್ತ್ರದಿ । ಮಾನದನುವೆಂದೆನಿಪ ಮಸ ನದಿ । ದಾನಶೀಲ ಸುಬುದ್ಧಿಯೊಳಗೆ ವದಾನ್ಯನೆನಿಸುವನು ॥ ವೈನತೇಯು ವರೂಥ ತತ್ತತ್ । ಸ್ಥಾನದಲಿ ತತ್ತತ್ಸ್ವಭಾವಗ- । ಳಾನುಸಾರ ಚರಿತ್ರೆಗಳ ಮಾಡುತಲಿ ನೆಲಸಿಪ್ಪ ॥ ೨೩ ॥

ಗ್ರಾಮುಪನೊಳಗ್ರಣಿಯೆನಿಸುವನು । ಗ್ರಾಮಣೀಯೆನಿಸುವನು ಜನರೊಳು । ಗ್ರಾಮುಪಗ್ರಾಮುಗಳೊಳಗೆ ಶ್ರೀಮಾನೆನಿಸುತಿಪ್ಪಾ ॥ ಶ್ರೀಮನೋರಮು ತಾನೆ ಯೋಗ- । ಕ್ಷೇಮುನಾಮುಕನಾಗಿ ಸಲಹುವ । ಯಾಮುಜಿಮೆ ಮಿಕ್ಕಾದದೇವರಿಗುಂಟೆ ಲೋಕದೊಳು ॥ ೨೪ ॥

ವಿಜಯುಸಾರಥಿಯೆಂದು ಗರುಡ- । ಧ್ವಜನ ಮೂರ್ತಿಯ ಭಕ್ತಿಪೂರ್ವಕ । ಭಜಿಸುತಿಪ್ಪ ಮುಹಾತ್ಮರಿಗೆ ಸರ್ವತ್ರದಲಿಯೊಲಿದೂ ॥ ವಿಜಯುದನು ತಾನಾಗಿ ಸಲಹುವ । ಭುಜಗಭೂಷಣಪೂಜ್ಯಚರಣಾಂ- । ಬುಜ ವಿಭೂಶಿದ ಭುವನಮೋಹನರೂಪ ನಿರ್ಲೇಪಾ ॥ ೨೫ ॥

ಅನಭಿಮುತ ಕರ್ಮುಪ್ರವಹದೊಳ- । ಗನಿಮಿಷಾದಿ ಸಮುಸ್ತ ಚೇತನ । ಗಣವಿಹುದು ತತ್ಫಲಗಳುಣ್ಣದೆ ಸೃಷ್ಟಿಸದ ಮುನ್ನಾ ॥ ವನಿತೆಯಿಂದೊಡಗೂಡಿ ಕರುಣಾ । ವನಧಿ ನಿರ್ಮಿಸಿ ತಮ್ಮತಮ್ಮಯ । ಅನುಚಿತೋಚಿತ ಕರ್ಮುಫಲಗಳನುಣುತ ಚರಿಸುವರು ॥ ೨೬ ॥

ಝುಲ್ಲಡಿಯನೆಳಲಂತೆ ಭವಸುಖ । ತಲ್ಲಣವಗೊಳಿಸುವದು ನಿಶ್ಚಯ- । ವಲ್ಲ ಸಾಲವ ಮಾಡಿ ಸಕ್ಕರೆ ಮೆದ್ದತೆರದಂತೆ ॥ ಕ್ಷುಲ್ಲಕರ ಕೂಡಾಡದಲೆ ಶ್ರೀ । ವಲ್ಲಭನ ಸದ್ಗುಣಗಣಂಗಳ । ಬಲ್ಲವರ ಕೂಡಾಡಿ ಸಂಪಾದಿಸು ಪರಂಪದವಾ ॥ ೨೭ ॥

ಝುಲ್ಲಡಿಯು ನೆಳಲಂತೆ ತೋರ್ಪದು । ಯೆಲ್ಲ ಕಾಲದಿ ಭವದ ಸೌಖ್ಯವು । ಯೆಲ್ಲಿ ಪೊಕ್ಕರು ಬಿಡದೆ ಬೆಂಬತ್ತಿಹುದು ಜೀವರಿಗೆ ॥ ಒಲ್ಲೆ ನೆಂದರೆ ಬಿಡದು ಹರಿನಿ- । ರ್ಮಾಲ್ಯ ನೈವೇದ್ಯವನೆ ಭುಂಜಿಸಿ । ಬಲ್ಲವರ ಕೂಡಾಡು ಭವದುಃಖಗಳ ನೀಡಾಡು ॥ ೨೮ ॥

ಕುಟ್ಟಿಕೊಯ್ದುದನಟ್ಟು ಯಿಟ್ಟದ । ಸುಟ್ಟು ಕೊಟ್ಟದ ಮುಟ್ಟ ಲಘಹಿ- । ಟ್ಟಟ್ಟು ಮಾಳ್ಪುದು ವಿಟ್ಠಲುಂಡುಚ್ಛಿಷ್ಟ ಸಜ್ಜನರಾ ॥ ಬಿಟ್ಟು ತನ್ನಯ ಹೊಟ್ಟೆಗೋಸುಗ । ಥಟ್ಟನುಣುತಿಹ ಕೆಟ್ಟಮನುಜರ । ಕಟ್ಟೆ ವೈದೆಮಪಟ್ಟಣದೊಳೊತ್ತಟ್ಟಲಿಡುತಿಹರು ॥ ೨೯ ॥

ಜಾಗುಮಾಡದೆ ಭೋಗದಾಶೆಯ । ನೀಗಿ ಪರಮನುರಾಗದಲಿ ವರ । ಭೋಗಿಶಯನನ ಆಗರದ ಹೆಬ್ಬಾಗಿಲಲಿ ನಿಂದು ॥ ಕೂಗುತಲಿ ಶಿರವಾಗಿ ಕರುಣಾ । ಸಾಗರನೆ ಭವರೋಗ ಭೇಷಜ । ಕೈಗೊಡೆಂದೆನೆ ಬೇಗಲೊದಗುವ ಭಾಗವತರರಸಾ ॥ ೩೦ ॥

ಏನು ಕರುಣವೊ ತನ್ನವರಲಿ ದ- । ಯಾನಿಧಿಗೆ ಸದ್ಭಕ್ತ ಜನರತಿ- । ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವಾ ॥ ಪ್ರಾಣಹಿಂಸಕ ಲುಬ್ಧಕಗೆ ಸು- । ಜ್ಞಾನಪಾಲಿಸಿ ತನ್ನ ಮಹಿಮೆ ಪು- । ರಾಣರೂಪದಿ ಪೇಳಿಸಿದ ರಘುಸೂನು ಸುಚರಿತ್ರ ॥ ೩೧ ॥

ಮೂಢಮಾನವನೆಲ್ಲಕಾಲದಿ । ಬೇಡಿಕೊಂಬೆನಿತೆಂದು ದೈನ್ಯದಿ । ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ ॥ ನೀಡುವರೆ ನಿನ್ನ ಮಲ ಗುಣಕೊಂ- । ಡಾಡಿ ಹಿಗ್ಗುವ ಭಾಗವತರೊಡ- । ನಾಡಿಸೆನ್ನನು ಜನ್ಮಜನ್ಮಗಳಲ್ಲಿ ಮರೆಯದಲೆ ॥ ೩೨ ॥

ಚತುರವಿಧ ಪುರುಷಾರ್ಥರೂಪನು । ಚತುರಮೂರ್ತ್ಯಾತ್ಮಕನಿರಲು ಮ- । ತ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು ॥ ಮತಿವಿಹೀನರು ಅಹಿಕಸುಖ ಶಾ- । ಶ್ವತವಿದೆಂದರಿದನುದಿನದಿ ಗಣ- । ಪತಿಯೆ ಮೊದಲಾದನ್ಯದೇವತೆಗಳನೆ ಭಜಿಸುವರು ॥ ೩೩ ॥

ದ್ರುಹಿಣ ಮೊದಲಾದಮರಗಣ ಸ- । ನ್ಮಹಿತ ಸರ್ವಪ್ರಾಣಿಗಳ ಹೃ- । ದ್ಗುಹಸಿವಾಸಿ ಗಭೀರ ಸರ್ವಾರ್ಥಪ್ರದಾಯಕನು ॥ ಅಹಿಕಪಾರ ತ್ರದಲಿ ವಿಹಿತಾ- । ವಿಹಿತಕರ್ಮಗಳರಿತು ಫಲಸ- । ನ್ನಿಹಿತನಾಗಿದ್ದೆಲ್ಲ ರಿಗೆ ಕೊಡುತಿಪ್ಪ ಸರ್ವಜ್ಞಾ ॥ ೩೪ ॥

ಒಮ್ಮೆಗಾದರು ಜೀವರೊಳು ವೈ- । ಷಮ್ಯದ್ವೇಷಾಸೂಯವಿಲ್ಲ ಸು- । ಧರ್ಮನಾಮಕ ಸಂತಯಿಸುವನು ಸರ್ವರನು ನಿತ್ಯಾ ॥ ಬ್ರಹ್ಮಕ ಲ್ಪಾಂತದಲಿ ವೇದಾ- । ಗಮ್ಯ ಶ್ರೀಜಗನ್ನಾಥವಿಟ್ಠಲ । ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯಾ ॥ ೩೫ ॥

ಅಂತು ಸಂಧಿ ೨೨ಕ್ಕೆ ಪದ ೭೨೦ಕ್ಕೆ ಸಕಲದುರಿತನಿವಾರಣಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

---

## ೨೩. ಕಲ್ಪಸಾಧನಸಂಧಿ.

### (ಅಪರೋಕ್ಷತಾರತಮ್ಯಸಂಧಿ.)

ಇದರಲ್ಲಿ ಬ್ರಹ್ಮಾದಿ ಜೀವರ ಕಲ್ಪಸಾಧನ ಮತ್ತು ಅಪರೋಕ್ಷ ಮತ್ತು ಕಾಲಮಾನ ಸಹ ಹೇಳುತ್ತಾರೆ.

---

॥ ಶ್ರೀಜಾನಕೀಜಾನಯೇ ನಮಃ ॥

ರಾಗ ಆರಭಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಏಕವಿಂಶತಿ ಮತಪ್ರವರ್ತಕ । ಕಾಕುಮಾಯ್ಗಳ ಕುಹಕಯುಕ್ತಿ ನಿ- । ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದಾ ॥ ಶ್ರೀಕಳ ತ್ರನ ಸದನ ದ್ವಿಜಪ ಪಿ- । ನಾಕಿಸನ್ನುತಮಹಿಮ ಪರಮಕೃ- । ಪಾಕ ಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥ ೧ ॥

ವೇಧಮೊದಲಾಗಿಪ್ಪಮಲಮೋ- । ಕ್ಷಾಧಿಕಾರಿಗಳಾದ ಜೀವರ । ಸಾಧನಗಳಪರೋಕ್ಷನಂತರ ಲಿಂಗಭಂಗವನು ॥ ಸಾಧುಗಳು ಚಿತ್ತವಿಪುದೆ ನ್ನಪ- । ರಾಧಗಳ ನೋಡದಲೆ ಚಕ್ರಗ- । ದಾಧರನು ಪೇಳಿಸಿದ ತೆರ ದಂದದಲಿ ಪೇಳುವೆನು ॥ ೨ ॥

ತೃಣ ಕೃಮಿ ದ್ವಿಜ ಪಶು ನರೋತ್ತಮ । ಜನಪ ನರ ಗಂಧರ್ವ ಗಣರಿವ- । ರೆನಿಪರಂಶವಿಹೀನಕರ್ಮ ಸುಯೋಗಿಗಳು ಯೆಂದೂ ॥ ತನು ಪ್ರತೀಕದಿ ಬಿಂಬನ ಉಪಾ- । ಸನವ ಗೈಯುತಲಿಂದ್ರಿಯಜಕ- । ರ್ಮನ ವರತ ಹರಿಗರ್ಪಿಸುತ ನಿರ್ಮಮರು ಎನಿಸುವರೂ ॥ ೩ ॥

ಏಳುವಿಧಜೀವಗಣ ಬಹಳ ಸು- । ರಾಳಿಸಂಖ್ಯಾ ನೇಮವುಳ್ಳದು । ತಾಳಿ ನರದೇಹವನು ಬ್ರಾಹ್ಮರ ಕುಲದಲವತರಿಸಿ ॥ ಸ್ಥೂಲ ಕರ್ಮವ ತೊರೆದು ಗುರುಗಳು । ಪೇಳಿದರ್ಥವ ತಿಳಿದು ತತ್ತ- । ತ್ಕಾಲ ಧರ್ಮ ಸಮರ್ಪಿಸುತಿಹರು ಕರ್ಮಯೋಗಿಗಳೂ ॥ ೪ ॥

ಹೀನಕರ್ಮಗಳಿಂದ ಬಹುವಿಧ । ಯೋನಿಯೊಳು ಸಂಚರಿಸಿ ಪ್ರಾಂತಕೆ । ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬಾ ॥ ಜ್ಞಾನಭಕ್ತಿಗಳಿಂದೆ ವೇದೋ- । ಕ್ತಾನುಸಾರ ಸಹಸ್ರಜನ್ಮದಿ । ನ್ಯೂನ ಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ ॥ ೫ ॥

ಹತ್ತು ಜನ್ಮಗಳಲ್ಲಿ ಹರಿಸ- । ರ್ವೋತ್ತಮ ಸುರಾಸುರಗಣಾರ್ಚಿತ । ಚಿತ್ರಕರ್ಮ ವಿಶೋಕನಂತಾನಂತರೂಪಾತ್ಮಾ ॥ ಸತ್ಯಸತ್ಸಂಕಲ್ಪ ಜಗದು- । ತ್ಪತ್ತಿಸ್ಥಿತಿಲಯಕಾರಣ ಜರಾ- । ಮೃತ್ಯುವರ್ಜಿತನೆಂದುಪಾ ಸನೆಗೈದ ತರುವಾಯಾ ॥ ೬ ॥

ಮೂರುಜನ್ಮಗಳಲ್ಲಿ ದೇಹಾ- । ಗಾರಪಶುಧನಪತ್ನಿಮಿತ್ರಕು- । ಮಾರಮಾತಾಪಿತೃಗಳಲ್ಲಿಹ ಸ್ನೇಹಕಿಂತಧಿಕ ॥ ಮಾರಮಣನಲಿ ಬಿಡದೆ ಮಾಡುವ । ಸೂರಿಗಳು ಯೀ ಮುಕ್ತ ಜನ್ಮವ । ಮೀರಿ ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ॥ ೭ ॥

ದೇವಗಾಯಕಜಾನ ಚಿರಪಿತೃ । ದೇವರೆಲ್ಲರು ಜ್ಞಾನಯೋಗಿಗ- । ಳಾವಕಾಲಕು ಪುಷ್ಕರ ಶನೈಶ್ಚರ ಉಷಾಸ್ವಾಹಾ ॥ ದೇವಿಬುಧಸನಕಾದಿಗಳು ಮೇ- । ಧಾವಳೀ ಪರ್ಜನ್ಯಸ್ವಾಂಶರು । ಯಿಾ ವುಭಯಗಣದೊಳಗಿವರು ವಿಜ್ಞಾನಯೋಗಿಗಳು ॥ ೮ ॥

ಭರತಖಂಡದಿ ಮೂರು ಜನ್ಮವ । ಧರಿಸಿ ನಿಷ್ಕಾಮುಕ ಸುಧರ್ಮ- । ಚರಿಸಿದಾನಂತರದಿ ದಶಸಾಹಸ್ರಜನ್ಮದಲೀ ॥ ಉರುತರಜ್ಞಾನವನು ಪಡದೈ- । ದೆರಡುದಶದೇಹದಲಿ ಭಕ್ತಿಯ । ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು ॥ ೯ ॥

ಸಾಧನಾತ್ಪೂರ್ವದಲಿ ಯಿವರಿಗ- । ನಾದಿಕಾಲಪರೋಕ್ಷವಿಲ್ಲನಿ- । ಷೇಧಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ ॥ ವೇದಶಾಸ್ತ್ರಗಳಲ್ಲಿಯಿಪ್ಪ ವಿ- । ರೋಧವಾಕ್ಯವ ಪರಿಹರಿಸಿ ಮಧು- । ಸೂದನನೆ ಸರ್ವೋತ್ತಮೋತ್ತಮನೆಂದು ಸ್ಮರಿಸುವರು ॥ ೧೦ ॥

ಸತ್ಯಲೋಕಾಧಿಪನವಿಡಿದು ಶ- । ತಸ್ಥದೇವಗಣಾಂತರೆಲ್ಲರು । ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲೀ ॥ ಭಕ್ತಿಯೋಗ್ಯರ ಮಧ್ಯದಲಿ ಸ- । ದ್ಭಕ್ತಿವಿಜ್ಞಾನಾದಿ ಗುಣದಿಂ- । ದುತ್ತಮೋತ್ತಮ ಬ್ರಹ್ಮವಾಯೂವಾಣಿವಾಗ್ದೇವೀ ॥ ೧೧ ॥

ಋಜುಗಣಕೆ ಭಕ್ತ್ಯಾದಿಗುಣ ಸಾ- । ಹಜವೆನಿಸುವವು ಕ್ರಮದಿ ವೃದ್ಧ್ಯಾ- । ಬ್ಜಜಪದವಿಪರ್ಯಂತ ಬಿಂಬೋಪಾಸನವು ಅಧಿಕಾ ॥ ವೃಜಿನವರ್ಜಿತರಿವರೊಳಗೆ ತ್ರಿಗು- । ಣಜವಿಕಾರಿಗಳಿಲ್ಲವೆಂದಿಗು । ದ್ವಿಜಫಣಿಪಮೃಡಶಕ್ರಮೊದಲಾದವರೊಳಿರುತಿಹವು ॥ ೧೨ ॥

ಸಾಧನಾತ್ಪೂರ್ವದಲಿ ಯಿಾ ಋ- । ಜ್ವಾದಿತಾತ್ವಿಕರೆನಿಪ ಸುರಗಣ- । ನಾದಿಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ॥ ಸಾಧನೋತ್ತರ ಸ್ವಸ್ವಬಿಂಬ ವು- । ಪಾಧಿರಹಿತಾದಿತ್ಯನಂದದಿ । ಸಾದರದಿ ನೋಡುವರು ಅಧಿಕಾರಾನುಸಾರದಲೀ ॥ ೧೩ ॥

ಛಿನ್ನಭಕ್ತರು ಯೆನಿಸುತಿಹರು ಸು- । ಪರ್ಣಶೇಷಾದ್ಯಮರರೆಲ್ಲಾ-। ಚ್ಛಿನ್ನಭಕ್ತರು ನಾಲ್ವರೆನಿಪರು ಭಾರತೀಪ್ರಾಣಾ ॥ ಪೊನ್ನೊಡಲ ವಾಗ್ದೇವಿಯರು ಪಣೆ- । ಗಣ್ಣ ಮೊದಲಾದವರೊಳಗೆ ತ- । ತ್ತನ್ನಿಯಾಮಕರಾಗಿ ವ್ಯಾಪಾರಗಳ ಮಾಡುವರು ॥ ೧೪ ॥

ಹೀನಸತ್ಕರ್ಮಗಳೆರಡು ಪವ- । ಮಾನದೇವನು ಮಾಳ್ಪನಿದಕನು- । ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪರ್ಗೆ ॥ ಪ್ರಾಣಪತಿ ಸಂಪ್ರೀತನಾಗಿ ಕು- । ಯೋನಿಗಳ ಕೊಡನೆಲ್ಲ ಕರ್ಮಗ- । ಳಾನೆ ಮಾಡುವೆನೆಂಬ ಮನುಜರ ನರಕಕ್ಕೈದಿಸುವ ॥ ೧೫ ॥

ದೇವಋಷಿಪಿತೃನೃಪನರೆನಿಸುವ । ಐವರೊಳು ನೆಲಸಿರ್ದು ಅವರಸ್ವ- । ಭಾವಕರ್ಮವ ಮಾಡಿ ಮಾಡಿಪನೊಂದುರೂಪದಲೀ ॥ ಭಾವಿಬ್ರಹ್ಮನು ಕೂರ್ಮರೂಪದಿ । ಯಿಾ ವಿರಿಂಚಾಂಡವನು ಬೆನ್ನಿಲಿ । ತಾ ವಹಿಸಿ ಲೋಕಗಳ ಪೊರೆವನು ದ್ವಿತಿಯರೂಪದಲೀ ॥ ೧೬ ॥

ಗುಪ್ತನಾಗಿರ್ದನಿಲದೇವ ದ್ವಿ- । ಸಪ್ತಲೋಕದ ಜೀವರೊಳಗತಿ । ಸಪ್ತಸಾವಿರದಾರುನೂರುಶ್ವಾಸಜಪಗಳನೂ ॥ ಸುಪ್ತಿಸ್ವಪ್ನದಿ ಜಾಗ್ರತೆಗಳ- । ಲ್ಲಾಪ್ತನಂದದಿ ಮಾಡಿ ಮಾಡಿಸಿ । ಕ್ಲಪ್ತಭೋಗಗಳೀವ ಪ್ರಾಂತಕೆ ತೃತಿಯರೂಪದಲೀ ॥ ೧೭ ॥

ಶುದ್ಧಸತ್ವಾತ್ಮಕ ಶರೀರದೊ- । ಳಿದ್ದಕಾಲಕು ಲಿಂಗದೇಹವು । ಬದ್ಧವಾಗದು ದಗ್ಧಪಟವೋಪಾದಿ ಯಿರುತಿಹದು ॥ ಸಿದ್ಧಸಾಧನ ಸರ್ವರೊಳಗನ- । ವದ್ಯನೆನಿಸುವ ಗರುಡಶೇಷ ಕ- । ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥

ಗಣದೊಳಗೆ ತಾನಿರ್ದು ಋಜುವೆಂ- । ದೆನಿಸಿಕೊಂಬನು ಕಲ್ಪಶತಸಾ- । ಧನವ ಗೈದಾನಂತರದಿ ತಾ ಕಲ್ಕಿಯೆನಿಸುವನೂ ॥ ದ್ವಿನವಶೀತಿಯ ಪ್ರಾಂತಭಾಗದ- । ಲನಿಲಹನುಮಭ್ಭೀಮರೂಪದಿ ॥ ದನುಜರೆಲ್ಲರ ಸದೆದು ಮಧ್ವಾಚಾರ್ಯನೆನಿಸಿದನು ॥ ೧೯ ॥

ವಿಶ್ವವ್ಯಾಪಕ ಹರಿಗೆ ತಾ ಸಾ- । ದೃಶ್ಯರೂಪವ ಧರಿಸಿ ಬ್ರಹ್ಮಸ- । ರಸ್ವತೀಭಾರತಿಗಳಿಂದೊಡಗೂಡಿ ಪವಮಾನ ॥ ಶಾಶ್ವತಸುಭಕ್ತಿಯಲಿ ಸುಜ್ಞಾ- । ನಸ್ವರೂಪನ ರೂಪಗುಣಗಳ- । ನಶ್ವರವು ಯೆಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥ ೨೦ ॥

ಖೇಟಕುಕ್ಕುಟಜಲಟವೆಂಬ ತ್ರಿ- । ಕೋಟಿರೂಪವ ಧರಿಸಿ ಸತತನಿ- । ಶಾಟರನು ಸಂಹರಿಸಿ ಸಲಹುವ ಸಕಲ ಸಜ್ಜನರಾ ॥ ಕೈಟಭಾರಿಯ ಪುರದ ರತ್ನಕ- । ವಾಟವೆನಿಸುವ ಗರುಡಶೇಷ ಲ- । ಲಾಟಲೋಚನ ಮುಖ್ಯಸುರರಿಗೆ ಆವಕಾಲದಲೀ ॥ ೨೧ ॥

ಈ ಋಜುಗಳೊಳಗೊಬ್ಬ ಸಾಧನ । ನೂರುಕಲ್ಪದಿ ಮಾಡಿ ಕರೆಸುವ । ಚಾರುತರ ಮಂಗಳ ಸುನಾಮದಿ ಕಲ್ಪಕಲ್ಪದಲೀ ॥ ಸೂರಿಗಳು ಸಂಸ್ತುತಿಸಿ ವಂದಿಸೆ । ಘೋರದುರಿತಗಳಳಿದುಪೋಪವು । ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ ॥ ೨೨ ॥

ಪಾಹಿ ಕಲ್ಕಿ ಸುತೇಜದಾಸನೆ । ಪಾಹಿ ಧರ್ಮಾಧರ್ಮಖಂಡನ । ಪಾಹಿ ವರ್ಚಸ್ವಿಯೆ ಖಷಣ ನಮೊ ಸಾಧು ಮಹಿಪತಿಯೆ ॥ ಪಾಹಿ ಸದ್ಧರ್ಮಜ್ಞ ಧರ್ಮಜ । ಪಾಹಿ ಸಂಪೂರ್ಣ ಶುಚಿ ವೈಕೃತ । ಪಾಹಿ ಅಂಜನ ಸರ್ಪನೆ ಖರ್ಪಟನೆ ಶ್ರದ್ಧಾಹ್ವಾ ॥ ೨೩ ॥

ಪಾಹಿ ಸಂಧ್ಯಾತ ವಿಜ್ಞಾನನೆ । ಪಾಹಿ ಮಹವಿಜ್ಞಾನಕೀರ್ತನ । ಪಾಹಿ ಸಂಕೀರ್ಣಾಖ್ಯ ಕತ್ಥನ ಪಾಹಿ ಬುದ್ಧ ಜಯಾ ॥ ಪಾಹಿ ಸುಮಹತ್ತರ ಸುವೀರ್ಯನೆ । ಪಾಹಿ ಮಾಂ ಮೇಧಾವಿ ಜಯಜಯ । ಪಾಹಿ ಮಾಂ ರಂತಿಮ್ನುಮನು ಮಾಂ ಪಾಹಿ ಮಾಂ ಪಾಹಿ ॥ ೨೪ ॥

ಪಾಹಿ ಮೋದಪ್ರಮೋದ ಸಂತಸ । ಪಾಹಿ ಆನಂದ ಸಂತುಷ್ಟನೆ । ಪಾಹಿ ಮಾಂ ಚಾರ್ವಂಗ ಚಾರುಸುಬಾಹು ಚಾರುಪದಾ ॥ ಪಾಹಿ ಪಾಹಿ ಸುಲೋಚನನೆ ಮಾಂ । ಪಾಹಿ ಸಾರಸ್ವತ ಸುವೀರನೆ । ಪಾಹಿ ಪ್ರಾಜ್ಞನೆ ಕಪಿಯಲಂಪಟ ಪಾಹಿ ಸರ್ವಜ್ಞಾ ॥ ೨೫ ॥

ಪಾಹಿ ಮಾಂ ಸರ್ವಜಿತು ಮಿತ್ರನೆ । ಪಾಹಿ ಪಾಪವಿನಾಶಕನೆ ಮಾಂ । ಪಾಹಿ ಧರ್ಮವಿನೇತ ಶಾರದ ಮೋಜ ಸುತಪಸ್ವೀ ॥ ಪಾಹಿ ಮಾಂ ತೇಜಸ್ವಿ ನಮೊ ಮಾಂ । ಪಾಹಿ ದಾನಸುಶೀಲ ನಮೊ ಮಾಂ । ಪಾಹಿ ಯಜ್ಞಸುಕರ್ತ ಯಜ್ವೀ ಯಾಗವರ್ತಕನೆ ॥ ೨೬ ॥

ಪಾಹಿ ಪ್ರಾಣ ತ್ರಾಣ ಅಮರುಷಿ । ಪಾಹಿ ಮಾಮುಪದೇಷ್ಟ ಮಾರಕ । ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞಾ ॥ ಪಾಹಿ ಕಾಲ ಸುಸೂಚಕನೆ ಮಾಂ । ಪಾಹಿ ಕಲಿಸಂಹರ್ತ ಕಲಿ ಮಾಂ । ಪಾಹಿ ಕಾಲ ಶ್ಯಾಮರೇತ ಸದಾರತ ಸುಬಲನೆ ॥ ೨೭ ॥

ಪಾಹಿ ಪಾಹಿ ಸಹೋ ಸದಾಕಪಿ । ಪಾಹಿ ಸಮ್ಯಗ್ಜ್ಞಾನ ದಶ ಕುಲ । ಪಾಹಿ ಮಾಂ ಶ್ರೋತವ್ಯ ನಮೊ ಸಂಕೀರ್ತಿತವ್ಯ ನಮೋ ॥ ಪಾಹಿ ಮಾಂ ಮಂತವ್ಯ ಕವ್ಯನೆ । ಪಾಹಿ ದ್ರಷ್ಟವ್ಯನೆ ಸುಸಖ್ಯನೆ । ಪಾಹಿ ಮಾಂ ಗಂತವ್ಯ ಕ್ರವ್ಯನೆ ಪಾಹಿ ಸ್ಮರ್ತವ್ಯ ॥ ೨೮ ॥

ಪಾಹಿ ಸವ್ಯ ಸುಭವ್ಯ ನಮೊ ಮಾಂ । ಪಾಹಿ ಸ್ವರ್ಗವ್ಯ ನಮೊ ಭಾವ್ಯನೆ । ಪಾಹಿ ಮಾಂ ಜ್ಞಾತವ್ಯ ನಮೊ ವಕ್ತವ್ಯ ಗವ್ಯ ನಮೋ ॥ ಪಾಹಿ ಮಾಂ ಲಾತವ್ಯ ವಾಯುವೆ । ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ । ಪಾಹಿ ಪಾಹಿ ಸರಸ್ವತೀಪತೆ ಜಗದ್ಗುರುವರ್ಯಾ ॥ ೨೯ ॥

ವಾಮನಪುರಾಣದಲಿ ಪೇಳಿದ । ಯೀಮಹಾತ್ಮರ ಪರಮಮಂಗಳ । ನಾಮಗಳ ಸಂಪ್ರೀತಿಪೂರ್ವಕ ನಿತ್ಯಸ್ಮರಿಸುವರಾ ॥ ಶ್ರೀಮನೋರಮನವರು ಬೇಡಿದ । ಕಾಮಿತಾರ್ಥಗಳಿತ್ತು ತನ್ನ ತ್ರಿ- । ಧಾಮದೊಳಗನುದಿನದಲಿಟ್ಟಾನಂದಬಡಿಸುವನೂ ॥ ೩೦ ॥

ಈ ಸಮೀರಗೆ ನೂರುಜನ್ಮ ಮ- । ಹಾಸುಖಪ್ರಾರಬ್ಧಭೋಗಪ್ರ- । ಯಾಸವಿಲ್ಲದಲೈದಿದನು ಲೋಕಾಧಿಪತ್ಯವನೂ ॥ ಭೂಸುರನ ಪೊಪ್ಪಿಡಿಯುವಲಿಗೆ ವಿ- । ಶೇಷಸೌಖ್ಯವನಿತ್ತ ದಾತನ । ದಾಸವರ್ಯನು ಲೋಕಪತಿಯೆನಿಸುವದು ಅಚ್ಚರವೆ ॥ ೩೧ ॥

ದ್ವಿಶತಕಲ್ಪಗಳಲ್ಲಿ ಬಿಡದೀ- । ಪೆಸರಿನಿಂದಲಿ ಕರೆಸಿದನು ತ- । ನ್ನೊಶಗಮರರೊಳಗಿಟ್ಟು ಮಾಡುವನವರ ಸಾಧನವಾ ॥ ಅಸದುಪಾಸನೆ ಗೈವ ಕಲ್ಯಾ- । ದ್ಯಸುರಪರ ಸಂಹರಿಸಿ ತಾ ಪೊಂ- । ಬಸಿರಪದವೈದಿದನು ಗುರುಪವಮಾನ ಸತಿಯೊಡನೆ ॥ ೩೨ ॥

ಅನಿಮಿಷರ ನಾಮದಲಿ ಕರೆಸುವ- । ನನಿಲದೇವನು ವೊಂದು ಕಲ್ಪದಿ । ವನಜಸಂಭವನೆನಿಸಿ ಯೆಂಭತ್ತೇಳುವರೆವರುಷ ॥ ಗುಣತ್ರಯ ವಿವರ್ಜಿತನ ಮಂಗಳ । ಗುಣಕ್ರಿಯಗಳ ಸುರೂಪಗಳುಪಾ- । ಸನವು ಅವ್ಯಕ್ತಾದಿ ಪೃಥ್ವ್ಯಂತರದಿ ಯಿರುತಿಹದು ॥ ೩೩ ॥

ಮಹಿತ ಋಜುಗಣಕೊಂದೆ ಪರಮೋ- । ತ್ಸಹ ವಿವರ್ಜಿತನೆಂಬೊ ದೋಷವು । ವಿಹಿತವೇ ಸರಿ ಇದನು ಪೇಳದೆ ಮುಕ್ತಬ್ರಹ್ಮರಿಗೆ ॥ ಬಹದು ಸಾಮ್ಯವು ಜ್ಞಾನಭಕುತಿಯು । ದ್ರುಹಿಣಪದಪರಿಯಂತ ವೃದ್ಧಿಯು । ಬಹಿರುಪಾಸನೆಯುಂಟನಂತರ ಬಿಂಬದರ್ಶನವು ॥ ೩೪ ॥

ಜ್ಞಾನರಹಿತ ಭಯತ್ವ ಪೇಳ್ವ ಪು- । ರಾಣ ದೈತ್ಯರ ಮೋಹಕವು ಚತು- । ರಾನನಗೆ ಕೂಡುವದೆ ಮೋಹಜ್ಞಾನಭಯಶೋಕಾ ॥ ಭಾನುಮಂಡಲ ಚಲಿಸಿದಂದದಿ । ಕಾಣುವದು ದೃಗ್ದೋಷದಿಂದಲಿ । ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೇ ॥ ೩೫ ॥

ಕಮಲಸಂಭವ ಸರ್ವರೊಳಗು- । ತ್ತಮನೆನಿಸುವನು ಯೆಲ್ಲ ಕಾಲದಿ । ವಿಮಲ ಭಕ್ತಿಜ್ಞಾನವೈರಾಗ್ಯಾದಿಗುಣದಂದ ॥ ಸಮಭ್ಯಧಿಕ ವಿವರ್ಜಿತನ ಗುಣ । ರಮೆಯ ಮುಖದಿಂದರಿತು ನಿತ್ಯದಿ । ದ್ಯುಮಣಿ ಕೋಟಿಗಳಂತೆ ಕಾಂಬನು ಬಿಂಬರೂಪವನು ॥ ೩೬ ॥

ಜ್ಞಾನಭಕ್ತ್ಯಾದ್ಯಖಿಳಗುಣ ಚತು- । ರಾನನೊಳಗಿಪ್ಪಂತೆ ಮುಖ್ಯ- । ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ ॥ ನ್ಯೂನಋಜುಗಣ ಜೀವರಲ್ಲಿ ಕ್ರ- । ಮೇಣ ವೃದ್ಧಿಜ್ಞಾನಭಕುತಿ ಸ- । ಮಾನ ಭಾರತಿವಾಣಿಗಳಲಿ ಪದಪ್ರಯುಕ್ತಧಿಕಾ ॥ ೩೭ ॥

ಸೌರಿ ಸೂರ್ಯರ್ನ ತೆರದಿ ಬ್ರಹ್ಮ ಸ- । ವಿಾರ ಗಾಯತ್ರೀ ಗಿರಿಗ ಳೊಳು । ತೋರುವದು ಅಸ್ಪಷ್ಟರೂಪದಿ ಮುಕ್ತಿಪರಿಯಂತಾ ॥ ವಾರಿಜಾ ಸನವಾಯುವಾಣೀ । ಭಾರತಿಗಳಿಗೆ ಮಹಾಪ್ರಳಯದಿ । ಬಾರದಜ್ಞಾನಾ ದಿದೋಷವು ಹರಿಕೃಪಾಬಲದಿ ॥ ೩೮ ॥

ನೂರುವರುಷಾನಂತರದಲಿ ಸ- । ರೋರುಹಾಸನ ತನ್ನ ಕಲ್ಪದ- । ಲಾರು ಮುಕ್ತಿಯನೈದುವರೊ ಅವರವರ ಕರದೊಯ್ದು ॥ ಶೌರಿಪುರದೊ ಳಗಿಪ್ಪ ನದಿಯಲಿ । ಕಾರುಣಿಕ ಸುಸ್ನಾನ ನಿಜಪರಿ- । ವಾರಸಹಿತದಿ ಮಾಡಿ ಹರಿವುದರಪ್ರವೇಶಿಸುವ ॥ ೩೯ ॥

ವಾಸುದೇವನ ಉದರದೊಳಗೆ ಪ್ರ- । ವೇಶಗೈದಾನಂತರದಿ ನಿ- । ರ್ದೋಷ ಮುಕ್ತರು ವುದರದಿಂ ಪೊರಮಟ್ಟು ಹರುಷದಲೀ ॥ ಈಶನಿಂ ದಾಜ್ಞೆಯ ಪಡದನಂ- । ತಾಸನ ಶ್ವೇತದ್ವೀಪಮೋಕ್ಷದಿ । ವಾಸವಾಗಿ ವಿಮುಕ್ತದುಃಖರು ಸಂಚರಿಸುತಿಹರು ॥ ೪೦ ॥

ಸತ್ವಸತ್ವ ಮಹಾಸುಸೂಕ್ಷ್ಮವು । ಸತ್ವಸತ್ವಾತ್ಮಕ ಕಳೇವರ । ಸತ್ಯಲೋಕಾಧಿಪನೆನಿಪಗತ್ಯಲ್ಪವೆರಡುಗುಣಾ ॥ ಮುಕ್ತಿಯೋಗ್ಯವಿದಲ್ಲ ಜಾಂಡೋ- । ತ್ಪತ್ತಿಕಾರಣವಲ್ಲ ಹರಿಪ್ರೀ- । ತ್ಯರ್ಥವಾಗೀ ಜಗದವ್ಯಾಪಾ ರಗಳ ಮಾಡುವನು ॥ ೪೧ ॥

ಪಾದನ್ಯೂನಶತಾಬ್ದ ಪರಿಯಂ- । ತೋದಿ ವುಗ್ರತಪಾಹ್ವಯದಿ ಲವ- । ಣೋದಧಿಯೊಳಗೆ ಕಲ್ಪದಶತಪವಿದ್ದನಂತರದೀ ॥ ಸಾಧಿಸಿದ ಮಹದೇವ ಪದವಾ- । ದೈದು ನವ ಕಲ್ಪಾವಸಾನಕೆ । ಐದುವನು ಶೇಷನ ಪದವ ಪಾರ್ವತಿ ಸಹಿತವಾಗೀ ॥ ೪೨ ॥

ಇಂದ್ರ ಮನು ದಶಕಲ್ಪಗಳಲಿ ಸು- । ನಂದನಾಮದಿ ಶ್ರವಣಗೈದು ಮು- । ಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪತಪವಿದ್ದೂ ॥ ನೊಂದು ಪೊಗೆಯೊಳು ಕೋಟಿ ವರುಷ ಪು- । ರಂದರನು ಅದನುಂಡನಂತರ । ಹೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ ॥ ೪೩ ॥

ಕರೆಸುವರು ಪೂರ್ವದಲಿ ಚಂದ್ರಾ- । ರ್ಕ ರತಿ ಶಾಂತಸುರೂಪ ನಾಮದಿ । ಯೆರಡೆರಡು ಮನುಕಲ್ಪ ಶ್ರವಣವ ಗೈದು ಮನುಕಲ್ಪಾ ॥ ವರತಪೋಬಲದಿಂದಲವರ್ಾ- । ಕ್ಕೆರಗಳಾಗೀರ್ವೈದುಸಾವಿರ । ವರುಷ ದುಃಖವ ನೀಗಿ ಕಾಂಬರು ಬಿಂಬರೂಪವನು ॥ ೪೪ ॥

ಸಾಧನಗಳಪರೋಕ್ಷನಂತರ- । ವೈದುವರು ಮೋಕ್ಷವನು ಶಿವ ಶ- । ಕ್ರಾದಿ ದಿವಿಜರು ವುಕ್ತಕ್ರಮದಿಂ ಕಲ್ಪ ಸಂಖ್ಯೆಯಲಿ ॥ ಐದಲೆಯು ಗೈವತ್ತುಹೇಂದ್ರ ಸ- । ಹೋದರನಿಗಿಪ್ಪತ್ತು ದ್ವಿನವತ್ವ- । ಗಾಧಿಪತಿ ಪ್ರಾಣನಿಗೆ ಗುರುಮನುಗಳಿಗೆ ಷೋಡಶವೂ ॥ ೪೫ ॥

ಪ್ರವಹಮರುತಗೆ ಹನ್ನೆರಡು ಸ್ವೈಂ- । ಧವ ದಿವಾಕರ ಧರ್ಮರಿಗೆ ದಶ। ನವ ಸುಕಲ್ಪವು ಮಿತ್ರರಿಗೆ ಶೇಷಶತಜನಕೆಂಟು ॥ ಕವಿ ಸನಕ ಸಾನಂದನಸನ- । ತ್ಕುವರಮುನಿಗಳಿಗೇಳು ವರುಣನ । ಯುವತಿಪರ್ಜ ನ್ಯಾದಿ ಪುಷ್ಕರಗಾರುಕಲ್ಪದಲಿ ॥ ೪೬ ॥

ಐದು ಕರ್ಮಜಸುರರಿಗಾಜಾ- । ನಾದಿಗಳಿಗೀರೆರಡು ಕಲ್ಪಾ- । ರ್ಥಾದಿಕತ್ರಯ ಗೋಪಿಕಾಸ್ತ್ರೀಯರಿಗೆ ಪಿತೃತ್ರಯವೂ ॥ ಈ ದಿವೌಕಸ ಮನುಜನಾಯಕ- । ರೈದುವರು ಯೆರಡೊಂದುಕಲ್ಪ ನ- । ರಾಧಿಪರಿಗರೆ ಕಲ್ಪದೊಳಗಪರೋಕ್ಷವಿರುತಿಹುದೂ ॥ ೪೭ ॥

ದೀಪಗಳನನುಸರಿಸಿ ದೀಪ್ತಿಯು । ವ್ಯಾಪಿಸಿ ಮಹಾತಿಮಿರ ಕಳೆದು ಪ- । ರೋಪಕಾರವ ಮಾಳ್ಪತೆರದಂದದಲಿ ಪರಮಾತ್ಮಾ॥ ಆ ಪಯೋ ಜಾಸನರೊಳಿದ್ದು ಸ್ವ- । ರೂಪಶಕ್ತಿಯ ವ್ಯಕ್ತಿಗೈಸುತ । ತಾ ಪೊಳೆವನವ ರಂತೆ ಚೇಷ್ಟೆಯ ಮಾಡಿ ಮಾಡಿಸುತಾ ॥ ೪೮ ॥

ಸ್ವೋದರಸ್ಥಿತಪ್ರಾಣರುದ್ರೇಂ- । ದ್ರಾದಿಸುರರಿಗೆ ದೇಹಗಳ ಕೊ- । ಟ್ಟಾದರದಲವರವರ ಸೇವೆಯ ಕೊಂಬನನವರತ ॥ ಮೋದಬೋಧದ ಯಾಬ್ಧಿ ತನ್ನಪ- । ರಾಧಿರೋಗವ ಕಳೆದು ಮಹದಪ- । ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ॥ ೪೯ ॥

ಪ್ರತಿಪ್ರತೀಕಲ್ಪದಲಿ ಸೃಷ್ಟಿ । ಸ್ಥಿತಿಲಯವ ಮಾಡುತಲೆ ಮೋದಿಪ । ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ ॥ ಘೃತವೆ ಮೃತ್ಯುಂಜಯನೆನಿಪ ದೇ- । ವತೆಗಳೆಂಬುಪಸೇಚನರು ಶ್ರೀ- ॥ ಪತಿಗೆ ಮೂಜಗವೆಲ್ಲ ಮೋದನತಿಥಿಯೆನಿಸಿಕೊಂಬಾ ॥ ೫೦ ॥

ಗರ್ಭಿಣೀಸ್ತ್ರೀವುಂಡಭೋಜನ । ಗರ್ಭಗತಶಿಶು ವುಂಬತೆರದಲಿ । ನಿರ್ಭಯನು ತಾನುಂಡುಣಿಸುವನು ಸರ್ವಜೀವರಿಗೆ ॥ ನಿರ್ಬಲತಿಪರ ಮಾಣುಜೀವಗೆ । ಹಬ್ಬುವದೆ ಸ್ಥೂಲಾನ್ನಭೋಜನ- । ವರ್ಭಕರು ಪೇಳು ವರು ಕೋವಿದರಿದನೊಡಂಬಡರೂ ॥ ೫೧ ॥

ಅಪಚಯುಗಳಿಲ್ಲುಂಡುದುದರಿಂ- । ದುಪಚಯುಗಳಿಲ್ಲಮುರಗಣ ದೊಳ- । ಗುಪಮರೆನಿಸುವರಿಲ್ಲ ಜನ್ಮಾದಿಗಳು ಮೊದಲಿಲ್ಲಾ ॥ ಅಪರಿ ಮಿತ ಸನ್ಮಹಿಮ ನರಹರಿ- । ಯುಪುನರಾವರ್ತರನು ಮಾಡುವ । ಕೃಪಣ ವತ್ಸಲ ಸ್ವಪದಸೌಖ್ಯವನಿತ್ತು ಶರಣರಿಗೇ ॥ ೫೨ ॥

ಬಿತ್ತಿ ಬೀಜವ ಭೂಮಿಯೊಳು ನೀ- । ರೆತ್ತಿ ಬೆಳಸಿದ ಬೆಳಸು ಪ್ರಾಂತಕೆ । ಕಿತ್ತು ಮೆಲುವಂದದಲಿ ಲಕ್ಷ್ಮೀರಮಣ ಲೋಕಗಳಾ ॥ ಮತ್ತೆ ಜೀವರ ಕರ್ಮ ಕಾಲೋ- । ತ್ಪತ್ತಿಸ್ಥಿತಿಲಯ ಮಾಡುತಲಿ ಸಮ- । ವರ್ತಿಯೆನಿಸುವ ಖೇದಮೋದಗಳಿಲ್ಲದನವರತಾ ॥ ೫೩ ॥

ಶ್ವಸನರುದ್ರೇಂದ್ರಪ್ರಮುಖ ಸುಮ- । ನಸರೊಳಿದ್ದರು ಕ್ಷುತ್ಪಿಪಾಸ ಗ- । ಳೊಶದೊಳಿಪ್ಪವು ಸಕಲಭೋಗಕೆ ಸಾಧನಗಳಾಗಿ ॥ ಅಸುರ ಪ್ರೇತ ಪಿಶಾಚಗಳು ಬಾ- । ಧಿಸುತಲಿಪ್ಪವು ದಿನದಿನದಿ ಮಾ- । ನಿಸರೊಳಗೆ ಮೃಗಪಕ್ಷಿ ಜೀವರೊಳಿದ್ದು ಪೋಗುವವೂ ॥ ೫೪ ॥

ವಾಸುದೇವಗೆ ಸ್ವಪ್ನಸುಷುಪ್ತಿಪಿ- । ಪಾಸಕ್ಷುದ್ಭಯ ಶೋಕ ಮೋಹಾ- । ಯಾಸವಿಸ್ಮೃತಿ ಮಾತ್ಸರಿಯ ಮದ ಪುಣ್ಯಪಾಪಾದಿ ॥ ದೋಷವರ್ಜಿತನೆಂದು ಬ್ರಹ್ಮಸ- । ದಾಶಿವಾದಿ ಸಮಸ್ತ ದಿವಿಜರು- । ಪಾಸನೆಯುಗೈದೆಲ್ಲಕಾಲದಿ ಮುಕ್ತರಾಗಿಹರು ॥ ೫೫ ॥

ಪರಮಸೂಕ್ಷ್ಮಕ್ಷಣವಯಿದು ತ್ರುಟಿ। ಕರೆಸುವದು ಐವತ್ತು ತ್ರುಟಿ ಲವ-। ವೆರಡುಲವವು ನಿಮೇಷ ನಿಮಿಷಗಳೆಂಟು ಮಾತ್ರಯುಗಾ॥ ಗುರು ದಶ ಪ್ರಾಣಾರುಪಳವು ಹ-। ನ್ನೆರಡುಬಾಣವು ಘಳಿಗೆ ತ್ರಿಂಶತಿ। ಯಿರು ಳುಹಗಲರುವತ್ತುಘಟಿಕಗಳಹೋರಾತ್ರಿಗಳು ॥ ೫೬ ॥

ಈ ದಿವಾರಾತ್ರಿಗಳೆರಡು ಹದಿ-। ನೈದು ಪಕ್ಷಗಳೆರಡು ಮಾಸಗ-। ಳಾದಪವು ಮಾಸದ್ವಯವೆ ಋತು ಋತುತ್ರಯಗಳಯನಾ॥ ಐದುವದು ಅಯನದ್ವಯಾಬ್ದ ಕೃ-। ತಾದಿಯುಗಗಳು ದೇವಮಾನದಿ। ದ್ವಾದಶಸ ಹಸ್ರವರುಷಗಳಹವದನು ಪೇಳುವೆನೂ ॥ ೫೭ ॥

ಚತುಸ್ಸಾವಿರದೆಂಟನೂರವು। ಕೃತಯುಗಕೆ ತ್ರಿಸಹಸ್ರಸಲೆ ಷಟ್। ಶತವು ತ್ರೈತೆಗೆ ದ್ವಾಪರಕೆ ದ್ವಿಸಹಸ್ರನಾನೂರು॥ ದಿತಿಜಪತಿ ಕಲಿಯುಗಕೆ ಸಾವಿರ। ಶತಗಳದ್ವಯಕೂಡಿ ಯಿಾದೇ-। ವತೆಗಳಿಗೆ ಹನ್ನೆರಡುಸಾವಿರ ವಹವು ವರುಷಗಳು ॥ ೫೮ ॥

ಪ್ರಥಮಯುಗ ಕೇಳಧಿಕವರೆ ವಿಂ-। ಶತಿ ಸುಲಕ್ಷಾಷ್ಟೋತ್ತರಶತ ವಿಂ-। ಶತಿಸಹಸ್ರ ಮನುಷ್ಯ ಮಾನಾಬ್ದಗಳು ಷಣ್ಣವತೀ॥ ವಿತಸಹ ಸ್ರದ ಲಕ್ಷದ್ವಾದಶ। ದ್ವಿತಿಯತ್ರಿತಿಯಕೆ ಯೆಂಟುಲಕ್ಷದ। ಚತುರಷಷ್ಟಿ ಸಹಸ್ರ ಕಲಿಗಿದರರ್ಧ ಚಿಂತಿಪುದು ॥ ೫೯ ॥

ಮೂರಧಿಕನಾಲ್ವತ್ತುಲಕ್ಷದ-। ಲಾರುಮೂರೆರಡಧಿಕಸಾವಿರ। ಈರೆರಡುಯುಗವರುಷ ಸಂಖ್ಯೆಯಗೈಯಲೆನಿತಿಹುದೊ॥ ಸೂರಿ ಪೆಚ್ಚಿಸೆ ಸಾವಿರದ ನಾ-। ನೂರುಮೂವತ್ತೆರಡುಕೋಟಿ ಸ-। ರೋರುಹಾಸನ ಗಿದು ದಿವಸವೆಂಬರು ವಿಪಶ್ಚಿತರು ॥ ೬೦ ॥

ಶತಧೃತಿಗೆ ಯಿಾದಿವಸಗಳು ತ್ರಿಂ-। ಶತಿಯು ಮಾಸದ್ವಾದಶಾಬ್ದವು। ಶತವೆರಡರೊಳು ಸರ್ವಜೀವೋತ್ಪತ್ತಿಸ್ಥಿತಿಲಯವೂ॥ ಶ್ರುತಿಸ್ಮೃತಿಗಳು ಪೇಳುತಿಹವ-। ಚ್ಯುತಗೆ ನಿಮಿಷವಿದೆಂದು ಸುಖಶಾ-। ಶ್ವತಗೆ ಷಾಸಟೆ ಯೆಂಬರೇ ಬ್ರಹ್ಮಾದಿ ದಿವಿಜರನು ॥ ೬೧ ॥

ಆದಿಮಧ್ಯಾಂತಗಳು ಯಿಲ್ಲದ । ಮಾಧವಗಿದುಪಚಾರವೆಂದು ಋ- । ಗಾದಿವೇದ ಪುರಾಣಗಳು ಪೇಳುವವು ನಿತ್ಯದಲಿ ॥ ಮೋದಮಯ ನಾನುಗ್ರಹವೆ ಸಂ- । ಪಾದಿಸಿ ರಮಾಬ್ರಹ್ಮರುದ್ರೇಂ- । ದ್ರಾದಿಗಳು ತಂತಮ್ಮ ಪದವಿಯನೈದಿ ಸುಖಿಸುವರು ॥ ೬೨ ॥

ಈ ಕಥಾಮೃತಪಾನಸುಖ ಸುವಿ- । ವೇಕಿಗಳಿಗಲ್ಲದಲೆ ವೈಷಿಕ- । ವ್ಯಾಕುಲಕುಚಿತ್ತರಿಗೆ ದೊರೆವುದೆ ಆವಕಾಲದಲೀ ॥ ಲೋಕವಾರ್ತೆಯ ಬಿಟ್ಟು ಯಿದನವ- । ಲೋಕಿಸುತ ಮೋದಿಪರಿಗೊಲಿವ ಕೃ- । ಪಾಕರ ಜಗನ್ನಾಥವಿಟ್ಠಲ ಕಾಯ್ವ ಕರುಣದಲಿ ॥ ೬೩ ॥

ಅಂತು ಸಂಧಿ ೨೪ಕ್ಕೆ ಪದ ೭೮೪ಕ್ಕೆ ಕಲ್ಪಸಾಧನಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

## ೨೫. ಬಿಂಬಾಪರೋಕ್ಷಸಂಧಿ.

ಪರಮಾತ್ಮ ಮತ್ತು ಜೀವರು ಬಿಂಬ ಪ್ರತಿಬಿಂಬರು; ಅದರ ಭಾವವನ್ನು ಇದರಲ್ಲಿ ಹೇಳುತ್ತಾರೆ.

॥ ಶ್ರೀಮತ್ಸರ್ವಜ್ಞಬಂಧವೇ ನಮಃ ॥

ರಾಗ ಪೂರ್ವಿ, ರೂಪಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಮುಕ್ತಬಿಂಬನು ತುರಿಯ ಜೀವ- । ನ್ಮುಕ್ತಬಿಂಬನು ವಿಶ್ವಭವ ಸಂ- । ಸಕ್ತಬಿಂಬನು ತೈಜಸನು ಅಸ್ಪೃಶ್ಯರಿಗೆ ಪ್ರಾಜ್ಞಾ ॥ ಶಕ್ತನಾದರು ಸರಿಯೆ ಸರ್ವೋ- । ದ್ರಿಕ್ತಮಹಿಮನು ದುಃಖಸುಖಗಳು । ವ್ಯಕ್ತಿ ಮಾಡುತಲಿಪ್ಪ ಕಲ್ಪಾಂತದಲಿ ಬಪ್ಪರಿಗೆ ॥ ೧ ॥

ಅನ್ನನಾಮಕ ಪ್ರಕೃತಿಯೊಳಗಾ-। ಚ್ಛನ್ನನಾಗಿಹ ಪ್ರಾಜ್ಞನಾಮದಿ। ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು ॥ ಅನ್ನದಾಂಬುದ ನಾಮ ವಿಶ್ವನು। ಭಿನ್ನನಾಮಕ್ರಿಯಗಳಿಂದಲಿ। ತನ್ನೊಳಗೆ ತಾ ರಮಿಪ ಪೂರ್ಣಾನಂದಜ್ಞಾನಘನಾ ॥ ೨ ॥

ಬೂದಿಯೊಳಗಡಗಿಪ್ಪನಳನೋ-। ಪಾದಿ ಚೇತನ ಪ್ರಕೃತಿಯೊಳಗ-। ನ್ನಾದನನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪೀ ॥ ಓದನಪ್ರದ ವಿಷ್ಣು ಪರಮಾ-। ಹ್ಲಾದದೀವುತ ತೃಪ್ತಿಬಡಿಸುವ-। ಗಾಧಮಹಿಮನ ಚಿತ್ರಕರ್ಮವನಾವ ಬಣ್ಣಿಸುವಾ ॥ ೩ ॥

ನಾದಭೋಜನ ಶಬ್ದದೊಳು ಬಿಂ-। ದೋದನೋದಕದೊಳಗೆ ಘೋಷನು। ವಾದದೊಳು ಶಾಂತಾಖ್ಯ ಜಠರಾಗ್ನಿಯೊಳು ಇರುತಿಪ್ಪಾ ॥ ವೈದಿಕ ಸುಶಬ್ದದೊಳು ಪುತ್ರ ಸ-। ಹೋದರಾನುಗರೊಳತಿಶಾಂತನ। ಪಾದಕಮಲನವರತ ಚಿಂತಿಸು ಯೀಪರಿಯಲಿಂದಾ ॥ ೪ ॥

ವೇದಮಾನಿ ರಮಾನುಪಾಸ್ಯ ಗು-। ಣೋದಧಿ ಗುಣತ್ರಯವಿವರ್ಜಿತ। ಸ್ವೋದರಸ್ಥಿತನಿಖಿಲಬ್ರಹ್ಮಾಂಡಾದ್ವಿಲಕ್ಷಣನು ॥ ಸಾಧು ಸಮ್ಮತವೆನಿಸುತಿಹ ನಿಷು-। ಸೀದಗಣಪತಿಯೆಂಬ ಶ್ರುತಿಪ್ರತಿ-। ಪಾದಿ ಸುವದನವರತವನ ಗುಣ ಪ್ರಾಂತಗಾಣದಲೆ ॥ ೫ ॥

ಕರೆಸುವನು ಮಾಯಾರಮಣ ತಾ। ಪುರುಷರೂಪದಿ ತ್ರಿಸ್ಥಳಗಳೊಳು। ಪರಮ ಸತ್ಪುರುಷಾರ್ಥದ ಮಹತ್ತತ್ವದೊಳಗಿದ್ದೂ ॥ ಸರಸಿಜಭವಾಂಡಸ್ಥಿತ ಸ್ತ್ರೀ-। ಪುರುಷ ತನ್ಮಾತ್ರಗಳ ಯೇಕೋ-। ತ್ತರ ದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದಾ ॥ ೬ ॥

ಈ ಶರೀರಿಗೆ ಪುರುಷ ತ್ರಿಗುಣದಿ। ಶ್ರೀಸಹಿತ ತಾನಿದ್ದು ಜೀವರಿ-। ಗಾಶೆ ಲೋಭಾಜ್ಞಾನಮದಮತ್ಸರ ಕುಮೋಹಕ್ಷುಧಾ ॥ ಹಾಸಹರ್ಷ ಸುಷುಪ್ತಿ ಸ್ವಪ್ನಪಿ-। ಪಾಸಜಾಗ್ರತೆ ಜನ್ಮಸ್ಥಿತಿಮೃತಿ। ದೋಷಪುಣ್ಯ ಜಯಾಪಜಯ ದ್ವಂದ್ವಗಳ ಕಲ್ಪಿಸಿದಾ ॥ ೭ ॥

ತ್ರಿವಿಧಗುಣಮಯದೇಹ ಜೀವಕೆ । ಕವಚದಂದದಿ ತೊಡಿಸಿ ಕರ್ಮ। ಪ್ರವಹದೊಳು ಸಂಚಾರಮಾಡಿಸುತಿಪ್ಪ ಜೀವರನು ॥ ಕವಿಸಿ ಮಾಯಾ ರಮಣ ಮೋಹವ । ಭವಕೆ ಕಾರಣನಾಗುವನು ಸಂ- । ಶ್ರವಣಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪಾ ॥ ೮ ॥

ನಾಶನಾಹ್ವಯ ಸ್ತ್ರೀಪುರುಷರೊಳು । ವಾಸವಾಗಿಹನೆಂದರಿತು ವಿ-। ಶ್ವಾಸಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರಾ ॥ ಕ್ಲೇಶನಾಶನ ನಚಲಗಳೊಳು ಪ್ರ- । ಕಾಶಿಸುತಲಿಹನಶನರೂಪೋ- । ಪಾಸನವ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ ॥ ೯ ॥

ಪ್ರಕೃತಿಪುರುಷಾತ್ಮಕರೆನಿಸುವ । ಪ್ರಕೃತಿಯೊಳು ವಿಶ್ವಾದಿರೂಪವ । ಪ್ರಕಟಮಾಳ್ಪನು ಯಥಾಮತಿಯೊಳು ಗುರುಕೃಪಾಬಲದೀ ॥ ಮುಕುರ ನಿರ್ಮಿತಸದನದೊಳು ಪೊಗೆ । ಸ್ವಕೀಯರೂಪವ ಕಾಂಬತೆರದಂ- ॥ ತಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ॥ ೧೦ ॥

ಪರಿಚ್ಛೇದತ್ರಯ ಪ್ರಕೃತಿಯೊಳ- । ಗಿರುತಿಹನು ವಿಶ್ವಾದಿರೂಪವ। ಧರಿಸುತಾತ್ಮಾದಿ ತ್ರಿರೂಪವ ಯಿಾಷಣತ್ರಯದಿ ॥ ಸುರುಚಿಜ್ಞಾನಾತ್ಮಸ್ವರೂಪದಿ । ತುರಿಯನಾಮಕ ವಾಸುದೇವನ । ಸ್ಮರಿಸು ಮುಕ್ತಿಸುಖಪ್ರದಾಯಕನೀತನಹುದೆಂದು ॥ ೧೧ ॥

ಕಮಲಸಂಭವಜನಕ ಜಡ ಜಂ- । ಗಮರೊಳಗೆ ನೆಲಸಿದ್ದು ಕ್ರಮವ್ಯ-। ತ್ಕ್ರಮದಿ ಕರ್ಮವ ಮಾಡಿ ಮಾಡಿಸುತಿಪ್ಪ ಬೇಸರದೆ॥ ಕ್ಷಮಕ್ಷಾಮಕವಿಾಹನಾಹ್ವಯ । ಸುಮನಸಾಸುರರೊಳಿರುತಲಹಂ । ಮಮನ ಮಮ ಯೆಂಬೀವುಪಾಸನೆ ಗೈವ ಪ್ರಾಂತದಲೀ ॥ ೧೨ ॥

ಈ ಸಮಸ್ತ ಜಗತ್ತು ಈಶಾ- । ವಾಸ್ಯವೆನಿಪುದು ಕಾರ್ಯರೂಪವು । ನಾಶವಾದರು ನಿತ್ಯವೇ ಸರಿ ಕಾರಣ ಪ್ರಕೃತಿ ॥ ಶ್ರೀಶಗೆ ಜಡಪ್ರತಿಮೆಯೆನಿಪುದು । ಮಾಸದೊಮ್ಮೆಗು ಸನ್ನಿಧಾನವು । ವಾಸವಾಗಿಹ ನಿತ್ಯ ಸಾಲಿಗ್ರಾಮದೋಪಾದಿ ॥ ೧೩ ॥

ಏಕಮೇವಾದ್ವಿತಿಯರೂಪಾ- । ನೇಕಜೀವರೊಳಿದ್ದು ತಾ ಪ್ರ- । ತ್ಯೇಕ ಕರ್ಮವ ಮಾಡಿ ಮೋಹಿಸುತಿಪ್ಪ ತಿಳಿಸದಲೇ ॥ ಮೂಕಬಧಿರಾಂಧಾದಿ ನಾಮಕ- । ನೀಕಳೇವರದೊಳಗೆ ಕರೆಸುವ । ಮಾಕಳತ್ರನ ಲೌಕಿಕಮಹಾಮಹಿಮೆಗೇನೆಂಬೇ ॥ ೧೪ ॥

ಲೋಕಬಂಧುರ್ಲೋಕನಾಥ ವಿ- । ಶೋಕ ಭಕ್ತರ ಶೋಕನಾಶನ । ಶ್ರೀಕರಾರ್ಚಿತ ಸೋಕದಂದದಲಿಪ್ಪ ಸರ್ವರೊಳು ॥ ಸಾಕುವನು ಸಜ್ಜನರ ಪರಮ ಕೃ- । ಪಾಕರೇಶ ಪಿನಾಕಿಸನ್ನುತ । ಸ್ವೀಕರಿಸುವಾನ ತರು ಕೊಟ್ಟ ಸಮಸ್ತಕರ್ಮಗಳಾ ॥ ೧೫ ॥

ಆಹಿತಪ್ರತಿಮೆಗಳೆನಿಸುವವು । ದೇಹಗೇಹಾಪತ್ಯಸತಿಧನ । ಲೋಹಕಾಷ್ಠ ಶಿಲಾಮೃದಾತ್ಮಕವಾದ ದ್ರವ್ಯಗಳಾ ॥ ನೇಹದಲಿ ಪರಮಾತ್ಮನೆನಗಿ- । ತ್ತೀಹನೆಂದರಿದನುದಿನದಿ ಸ- । ನ್ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ ॥ ೧೬ ॥

ಶ್ರೀತರುಣಿವಲ್ಲಭಗೆ ಜೀವರು । ಚೇತನಪ್ರತಿಮೆಗಳ ಮೋತ- । ಪ್ರೋತನಾಗಿದ್ದೆಲ್ಲರೊಳು ವ್ಯಾಪಾರಮಾಡುತಿಹಾ ॥ ಹೋತಸರ್ವೇಂದ್ರಿಯಗಳೊಳು ಸಂ- । ಪ್ರೀತಿಯಿಂದುಂಡುಣಿಸಿ ವಿಷಯ ನಿ- । ರ್ವಾತದೇಶಗ ದೀಪದಂದದಲಿಪ್ಪ ನಿರ್ಭಯದಿ ॥ ೧೭ ॥

ಭೂತ ಸೋಕಿದ ಮಾನವನು ಬಹು । ಮಾತನಾಡುವ ತೆರದಿ ಮಹದ- । ದ್ಭೂತವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವು ॥ ಕೈತವೋಕ್ತಿಗಳಲ್ಲ ಶೇಷಫ- । ಣಾತಪತ್ರಗೆ ಜೀವಪಂಚಕ । ವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರೆಸುವದು ॥ ೧೮ ॥

ದಿವಿಯೊಳಿಪ್ಪವು ಮೂರು ಪಾದಗ- । ಳವನಿಯೊಳಗಿಹುದೊಂದು ಯಿಾವಿಧ । ಕವಿಭಿರೀಡಿತ ಕರೆಸುವ ಚತುಷ್ಪಾತು ತಾನೆಂದು ॥ ಇವನ ಪಾದಚತುಷ್ಟಯಗಳನು । ಭವಕೆ ತಂದು ನಿರಂತರದಿ ಉ- । ದ್ಧವನ ಸಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರೂ ॥ ೧೯ ॥

ವಂಶ ಬಾಗಲು ಬೆಲೆಯು ಕಂಡು ನ- । ರಾಂಸದಲಿ ಶೋಭಿಪುದು ಬಾಗದ- । ವಂಶ ಪಾಶದಿ ಕಟ್ಟಿ ಯೇರುವ ಡೊಂಬ ಮಸ್ತಕಕೆ ॥ ಕಂಸ ಮರ್ದನ ದಾಸರಿಗೆ ನಿ- । ಸ್ಸಂಶಯದಿ ಯೆರಗದಲೆ ನಾ ವಿ- । ದ್ವಾಂಸ ನೆಂದಾಹಂಕರಿಸೆ ಭವಗುಣದಿ ಬಂಧಿಸುವ ॥ ೨೦ ॥

ಜ್ಯೋತಿರೂಪಗೆ ಪ್ರತಿಮೆಗಳು ಸಾಂ- । ಕೇತಿಕಾರೋಪಿತ ಸುಪೌರುಷ । ಧಾತುಸಪ್ತಕ ಧೈರ್ಯಶೌರ್ಯೋದಾರ್ಯಚಾತುರ್ಯ ॥ ಮಾತು ಮಾನ ಮಹತ್ವಸಹನ ಸು- । ನೀತಿ ನಿರ್ಮಲದೇಶ ಬ್ರಾಹ್ಮಣ । ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯಸ್ಥಾನ ॥ ೨೧ ॥

ಜೀವರಾಶಿಯೊಳಮೃತ ಶಾಶ್ವತ । ಸ್ಥಾವರಗಳೊಳು ಸ್ಥಾಣುನಾಮಕ- । ನಾವಕಾಲದೊಳಿಪ್ಪನಜಿತಾನಂತನೆಂದೆನಿಸೀ ॥ ಗೋವಿದಾಂಪತಿ ಗಾಯನಪ್ರಿಯ । ಸಾವಯವ ಸಾಹಸ್ರನಾಮ ಪ- । ರಾವರೇಶ ಪವಿತ್ರ ಶರ್ವ ವಿಪಶ್ಚಿತ ಸುಧಾಮ ॥ ೨೨ ॥

ಮಾಧವನ ಪೂಜಾರ್ಥವಾಗಿ ನಿ- । ಷೇಧಕರ್ಮವ ಮಾಡಿ ಧನ ಸಂ- । ಪಾದಿಸಲು ಸತ್ಪುಣ್ಯಕರ್ಮಗಳೆನಿಸಿಕೊಳುತಿಹವೂ ॥ ಸ್ವೋದರಂಭರಣಾರ್ಥ ನಿತ್ಯದಿ । ಸಾಧುಕರ್ಮವ ಮಾಡಿದರು ಸರಿ- । ಯ್ಯೈದುವನು ದೇಹಾಂತರವ ಸಂದೇಹವಿನಿತಿಲ್ಲ ॥ ೨೩ ॥

ಅಪಗತಾಶ್ರಯ ಯೆಲ್ಲರೊಳಗಿ- । ದ್ದುಪಮನೆನಿಪಾನುಪಮರೂಪನು- । ಶಫರಕೇತನಜನಕ ಮೋಹಿಪ ಮೋಹಕನ ತೆರದಿ ॥ ತಪನಕೋಟಿಶಮಪ್ರಭಾಸಿತ । ವಪುವೆನಿಪ ಕೃಷ್ಣಾದಿರೂಪಕ । ದ್ವಿಪಗಳಂತುಂಡುಣಿಪ ಸರ್ವತ್ರದಲಿ ನೆಲಸಿದ್ದು ॥ ೨೪ ॥

ಅಡವಿಯಲಿ ಬಿತ್ತದಲೆ ಬೆಳದಿಹ । ಗಿಡದ ಮೂಲಿಕೆ ಸಕಲ ಜೀವರ । ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ ॥ ಜಡಜಸಂಭವ ಜನಕ ತ್ರಿಜಗ- । ದ್ವಡೆಯ ಸಂತೈಸೆನಲು ಅವರಿ- । ದ್ದೆಡೆಗೆ ಬಂದೊದಗುವನು ಭಕ್ತರ ಭಿಡೆಯ ಮೀರದಲೆ ॥ ೨೫ ॥

ಶ್ರೀನಿಕೇತನ ತನ್ನವರ ದೇ- । ಹಾನುಬಂಧಿಗಳಂತೆ ಅವ್ಯವ-
ಧಾನದಲಿ ನೆಲಸಿಪ್ಪ ಸರ್ವದ ಸಕಲ ಕಾಮದನು ॥ ಏನು ಕೊಟ್ಟರು
ಭುಂಜಿಸುತ ಮು- । ದ್ದಾನೆಯಂದದಿ ಸಂಚರಿಸು ಮ- । ತ್ತೇನು ಬೇಡದೆ
ಭಜಿಸುತಿರು ಅವನಂಘ್ರಿಕಮಲಗಳಾ ॥ ೨೬ ॥

ಬೇಡದಲೆ ಕೊಡುತಿಪ್ಪ ಸುರರಿಗೆ । ಬೇಡಿದರೆ ಕೊಡುತಿಹನು ನರ
ರಿಗೆ । ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ ॥ ಮೂಢ
ರನುದಿನ ಧರ್ಮಕರ್ಮವ । ಮಾಡಿದರು ಸಂಯುಹಿಕಫಲಗಳ । ನೀಡಿ
ಉನ್ಮತ್ತರನ ಮಾಡಿ ಮಹಾನಿರಯವೀವಾ ॥ ೨೭ ॥

ತರಣಿ ಸರ್ವತ್ರದಲಿ ಕಿರಣವ । ಹರಹಿ ತತ್ತದ್ವಸ್ತುಗಳನನು- ।
ಸರಿಸಿಯುದರದರಂತೆ ಛಾಯವು ಕಂಗೊಳಿಪ ತೆರದಿ ॥ ಅರಿಧರೇಜಾನೇಜ
ಜಗದೊಳ- । ಗಿರುವ ಛಾಯಾತಪನೆನಿಸಿ ಸಂ- । ಕರುಷಣಾಹ್ವಯನವ
ರವರ ಯೋಗ್ಯತೆಗಳಂತಿಪ್ಪ ॥ ೨೮ ॥

ಈ ವಿಧದಿ ಸರ್ವತ್ರ ಲಕ್ಷ್ಮೀ । ಭೂವನಿತೆಯರ ಗೂಡಿ ತನ್ನ ಕ- ।
ಳಾವಿಶೇಷಗಳೆಲ್ಲ ಕಡೆಯಲಿ ತುಂಬಿ ಸೇವ್ಯತಮ ॥ ಸೇವಕನು ತಾನೆನಿಸಿ
ಮಾಯಾ- । ದೇವಿರಮಣ ಪ್ರವಿಷ್ಟರೂಪಕ । ಸೇವೆಮಾಳ್ಪ ಶರಣ್ಯಶಾ
ಶ್ವತ ಕರುಣಿ ಕಮಲಾಕ್ಷಾ ॥ ೨೯ ॥

ಪ್ರಣವಕಾರಣಕಾರ್ಯಪ್ರತಿಪಾ- । ದ್ಯನು ಪರಾತ್ಪರ ಚೇತನಾ
ಚೇ- । ತನವಿಲಕ್ಷಣನಂತ ಸತ್ಕಲ್ಯಾಣಗುಣಪೂರ್ಣಾ ॥ ಅನುಪಮನು
ಪಾಸಿತ ಗುಣೋದಧಿ- । ಯನಘನಜಿತಾನಂತ ನಿಷ್ಕಿಂ- । ಚನಜನಪ್ರಿ
ಯ ನಿರ್ವಿಕಾರ ನಿರಾಶ್ರಯಾವ್ಯಕ್ತಾ ॥ ೩೦ ॥

ಗೋಪಭೀಯ ಭವಾಂಧಕಾರಕೆ । ದೀಪವಟ್ಟಿಗೆ ಸಕಲಸುಖಸದ- ।
ನೋಪರಿಗ್ರಹವೆನಿಸುತಿಪ್ಪುದು ಹರಿಕಥಾಮೃತವೂ ॥ ಗೋಪತಿಜಗನ್ನಾಥ
ವಿಠಲ ಪ- । ವಿಾಪದಲಿ ನೆಲಸಿದ್ದು ಭಕ್ತರ । ಅಪವರ್ಗರ ಮಾಡುವನು
ಬಹುದುಃಖಭವದಿಂದಾ ॥ ೩೧ ॥

**ಅಂತು ಸಂಧಿ ೨೪ಕ್ಕೆ ಪದ ೬೧೪ಕ್ಕೆ ಬಿಂಬಾಪರೋಕ್ಷಸಂಧಿ ಸಮಾಪ್ತ.**

## ೨೫. ಆರೋಹಣತಾರತಮ್ಯಸಂಧಿ.

ತೀವ್ರಮನನಕ್ಕೆ ಬರುವದರ ಉದ್ದಿಶ್ಯ ಶುದ್ಧ ಜಡಗಳು ಮೊದಲುಮಾಡಿಕೊಂಡು ಮಾನುಷಚಕ್ರವರ್ತಿಗಳ ಪರ್ಯಂತ ತಾರತಮ್ಯ ಹೇಳುತ್ತಾರೆ. ಮತ್ತು ಮುಕ್ತಿಯಲ್ಲಿ ಕೂಡಾ ತಾರತಮ್ಯ ಉಂಟೆಂತ ಸಹ ಹೇಳುತ್ತಾರೆ.

॥ ಶ್ರೀವಾಸುದೇವಾಯ ನಮಃ ॥

ರಾಗ ಮುಖಾರಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:—** ಭಕ್ತರೆನಿಸುವ ದಿವ್ಯಪುರುಷರ । ಉಕ್ತಿಲಾಲಿಸಿ ಪೇಳ್ದ ಮುಕ್ತಾ- । ಮುಕ್ತಜೀವರ ತಾರತಮ್ಯವ ಮುನಿಪ ಶಾಂಡಿಲ್ಯ ॥

ಸ್ಥಾವರರ ನೋಡಲ್ಕೆ ತೃಣ ಕ್ರಿಮಿ । ಜೀವರುತ್ತಮ ಕ್ರಿಮಿಗಳಿಂದಲ- । ಜಾವಿಗೋಗಜವ್ಯಾಘ್ರಸಿಂಹಗಳಿಂದ ಶೂದ್ರಾದಿ ॥ ಮೂವರುತ್ತಮಕರ್ಮಕರು ಭೂ- । ದೇವರುತ್ತಮಕರ್ಮಿ ನೋಡಲು । ಕೋವಿದೋತ್ತಮ ಕವಿಗಳಿಂದಲಿ ಕ್ಷಿತಿಪರುತ್ತಮರೂ ॥ ೧ ॥

ಧರಣಿಪರ ನೋಡಲ್ಕೆ ನರ ಗಂ- । ಧರುವರುತ್ತಮ ದೇವಗಂಧ- । ರ್ವರ ಗಣೋತ್ತಮರಿವರಿಗಿಂದ ಶತೋನ ಶತಕೋಟೀ ॥ ಪರಮಋಷಿಗಳು ಉತ್ತಮರು ಸ್ತ್ರೀ- । ಯರುಸಮಾನರು ಇವರಿಗಿಂದಲಿ । ಚಿರಪಿತೃಗಳುತ್ತಮರು ಚಿರನಾಮಕ ಪಿತೃಗಳಿಂದಾ ॥ ೨ ॥

ಎರಡಯಿದು ಯೆಂಭತ್ತು ಋಷಿ ತುಂ- । ಬುರು ಶತೋರ್ವಶಿಯಪ್ಸರಸ್ತ್ರೀ- । ಯರು ಶತಾಜಾನಜರು ಉತ್ತಮ ಚಿರಪಿತೃಗಳಿಂದಾ ॥ ವರರು ಊರ್ವಶಿಗಿಂದ ವೈಶ್ವಾ- । ನರನ ಸುತರೀರೆಂಟುಸಾವಿರ । ಹರದಿಯರೊಳುತ್ತಮಕೆ ಸೇರ್ಯೆಪ್ಪತ್ತುನಾಲ್ಕು ಜನಾ ॥ ೩ ॥

ಸರಿಯೆನಿಪರು ವ್ರಜೌಕಸಸ್ತ್ರೀ- । ಯರು ಸುರಾಸ್ಯಾತ್ಮಜರಿಗೇ ಪು- । ಷ್ಕರನು ಕರ್ಮಪ ಪುಷ್ಕರನಿಗೆ ಶನ್ಯೈಶ್ಚರೋತ್ತಮನೂ ॥ ತರಣಿಜ ನಿಗುತ್ತಮಳುಷಾಶ್ವಿನಿ । ಸುರರರಸಿಗುತ್ತಮ ಜಲಪ ಬುಧ । ಶರಧಿಜಾ ತ್ಮಜಗುತ್ತಮ ಸ್ವಹದೇವಿಯೆನಿಸುವಳೂ ॥ ೪ ॥

ಅನಳಭಾರ್ಯರ್ಳಿಗಿಂದನಾಖ್ಯಾ- । ತನಿಮಿಷರನಾಖ್ಯಾತರಿಂದಲಿ । ಧನಪ ಪರ್ಜನ್ಯಾನಿರುದ್ಧನ ಸ್ತ್ರೀಯುಷಾದೇವೀ ॥ ದ್ಯುನದಿ ಸಂಜ್ಞಾ ಶಾಮಲಾ ರೋ- । ಹಿಣಿಗಳೈವರು ಸಮರನಾಖ್ಯಾ- । ತನಿಮಿಷೋತ್ತಮ ರಿವರಿಗಿಂದಲಿ ನೂರು ಕರ್ಮಜರು ॥ ೫ ॥

ಪೃಥು ನಹುಷ ಶಶಿಬಿಂದು ಪ್ರಿಯ- । ವ್ರತ ಪರೀಕ್ಷಿತ ನೃಪರು ಭಾಗೀ- । ರಥಿಯ ನೋಡಲ್ಕಧಿಕ ಬಲ್ಯಾದಿಂದ್ರಸಪ್ತಕರೂ ॥ ಪಿತೃಗಳೆಂ ಟಿಂಟಧಿಕವಪ್ಸರ- । ಸತಿಯರೀರ್ಧೈದೊಂದು ಮನುಗಳು । ದಿತಿಜಗುರು ಚಾವನ ಉಚಥ್ಯರು ಕರ್ಮಜರು ಸಮರೂ ॥ ೬ ॥

ಧನಪ ವಿಷ್ವಕ್ಸೇನ ಗಣಪಾ- । ಶ್ವಿನಿಗಳೆಂಭತ್ತೈದು ಶೇಷರಿ- । ಗೆಣೆ ಯೆನಿಸುವರು ಮಿತ್ರ ತಾರಾ ನಿಋುಋುತಿ ಪ್ರವಹಿ ॥ ಗುಣಗಳಿಂದೈದಧಿಕ ಯೆಂಭ- । ತ್ತೆನಿಪ ಶೇಷರಿಗುತ್ತಮರು ಸ- । ನ್ಮುನಿಮರೀಚಿಪುಲಸ್ತ್ಯಪು ಲಹಕ್ರತುವಸಿಷ್ಠಮುಖಾ ॥ ೭ ॥

ಅತ್ರಿಯಂಗಿರರೇಳು ಬ್ರಹ್ಮನ । ಪುತ್ರರಿವರಿಗೆ ಸಮರು ವಿಶ್ವಾ- । ಮಿತ್ರ ವೈವಸ್ವತರು ಯೋಶಾವೇಶಬಲದಿಂದ ॥ ಮಿತ್ರರಿಂದುತ್ತಮರು ಸ್ವಾಹಾ- । ಭರ್ತೃ ಭೃಗುವು ಪ್ರಸೂತಿ ವಿಶ್ವಾ- । ಮಿತ್ರ ಮೊದಲಾದವರಿ ಗಿಂದಲಿ ಮೂವರುತ್ತಮರೂ ॥ ೮ ॥

ನಾರದೋತ್ತಮನಗ್ನಿಗಿಂದಲಿ । ವಾರಿನಿಧಿ ಪಾದೋತ್ತಮನು ಯಮು । ತಾರಕೇಶದಿವಾಕರರು ಶತರೂಪ ಉತ್ತಮರೂ ॥ ವಾರಿಜಾಪ್ತ ನಿಗಿಂದ ಪ್ರಾವಹ ಮಾರುತೋತ್ತಮ ಪ್ರವಹಗಿಂದಲಿ । ಮಾರಪುತ್ರನಿ ರುದ್ಧ ಗುರು ಮನು ದಕ್ಷಶಚಿರತಿಯೂ ॥ ೯ ॥

ಆರು ಜನರುಗಳಿಂದಲಾಹಂ- । ಕಾರಿಕ ಪ್ರಾಣೋತ್ತಮುಖಿಳ ಶ- । ರೀರಮಾನಿ ಪ್ರಾಣಗಿಂದಲಿ ಇಂದ್ರಕಾಮರಿಗೆ ॥ ಗೌರಿವಾರುಣಿ ಖಗಪ ರಾಣಿಗೆ । ಶೌರಿಮಹಿಷಿಯರೊಳಗೆ ಜಾಂಬವ- । ತೀ ರಮಾಯುತಳಾದ ಕಾರಣವಧಿಕಳೆನಿಸುವಳು ॥ ೧೦ ॥

ಹರಫಣಿಪವಿಹಗೇಂದ್ರ ಮೂವರು । ಹರಿಮಡದಿಯರಿಗುತ್ತಮರು ಸೌ । ಪರಣಿಪತಿಗುತ್ತಮರು ಭಾರತಿವಾಣಿಗೀರ್ವರಿಗೇ ॥ ಮರುತ ಬ್ರಹ್ಮರು ಪುತ್ತಮರು ಯಿಂ- । ದಿರೆಯು ಪರಮೋತ್ತಮಳು ಲಕ್ಷ್ಮಿಗೆ । ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳೂ ॥ ೧೧ ॥

ಶ್ರೀಮುಕುಂದನ ಮಹಿಳೆ ಲಕುಮಿ ಮ- । ಹಾಮಹಿಮೆಗೇನೆಂಬೆ ಬ್ರಹ್ಮೇ- । ಶಾಮರೇಂದ್ರರ ಸೃಷ್ಟಿ ಸ್ಥಿತಿಲಯಗೈಸಿ ಅವರವರಾ ॥ ಧಾಮ ಗಳ ಕಲ್ಪಿಸಿ ಕೊಡುವಳಜ- । ರಾಮರಣಳಾಗಿರ್ದು ಸರ್ವ- । ಸ್ವಾಮಿ ಮಮ ಗುರುವೆಂದುಪಾಸನೆ ಮಾಳ್ಪಳಚ್ಯುತನಾ ॥ ೧೨ ॥

ಈಸು ಮಹಿಮೆಗಳುಳ್ಳ ಲಕುಮಿ ಪ- । ರೇಶನಾನಂತಾಂಶ ಗುಣ ದೊಳು । ಲೇಶಲೇಶಕೆ ಸರಿಯೆನಿಸಳಾವಾವಕಾಲದಲೀ ॥ ದೇಶಕಾಲಾ ತೀತಲಕ್ಷ್ಮಿಗೆ । ಕೇಶವನ ವಕ್ಷಸ್ಥಳವೆ ಅವ- । ಕಾಶವಾಯಿತು ಯಿವನ ಮಹಿಮೆ ವ್ಯಾಪ್ತಿಗೆಣೆಯುಂಟೆ ॥ ೧೩ ॥

ಒಂದು ರೂಪದೊಳೊಂದವಯವದೊ- । ಳೊಂದು ರೋಮದೊ ಳೊಂದು ದೇಶದಿ । ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣಾ ॥ ಸಿಂಧು ಸಪ್ತದ್ವೀಪ ಮೇರು ಸು- । ಮಂದರಾದ್ರ್ಯಾದಿಗಳು ಬಹ್ಮ ಪು- । ರಂದರಾದಿ ಸಮಸ್ತಲೋಕಪರಾಲಯಗಳೆಲ್ಲಾ ॥ ೧೪ ॥

ಸರ್ವದೇವೋತ್ತಮನು ಸರ್ವಗ । ಸರ್ವಗುಣ ಸಂಪೂರ್ಣ ಸರ್ವ ದ । ಸರ್ವತಂತ್ರ ಸ್ವತಂತ್ರ ಸರ್ವಾಧಾರ ಸರ್ವಾತ್ಮ ॥ ಸರ್ವತೋಮುಖ ಸರ್ವನಾಮಕ । ಸರ್ವಜನಸಂಪೂಜ್ಯ ಶಾಶ್ವತ । ಸರ್ವಕಾಮದ ಸರ್ವ ಸಾಕ್ಷಿಗ ಸರ್ವಜಿತ್ಸರ್ವಾ ॥ ೧೫ ॥

ತಾರತಮ್ಯಾರೋಹಣವ ಬರ- । ದಾರು ಪಠಿಸುವರವರ ಲಕ್ಷ್ಮೀ । ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು ॥ ಪೂರಯಿಸುವ ಮನೋ ರಥಂಗಳ । ಕಾರುಣಿಕ ಕೈವಲ್ಯದಾಯಕ । ದೂರಗೈವ ಸಮಸ್ತ ದುರಿತವ ವೀತಭಯಶೋಕ ॥ ೧೬ ॥

ಪ್ರಣತ ಕಾಮದನಂಘ್ರಿ ಸಂವರು- । ಶನದಪೇಕ್ಷೆಗಳುಳ್ಳವಗೆ ನಿ- । ಚ್ಚಣಿಕೆಯೆನಿಪುದು ಜಡವೊದಲು ಬ್ರಹ್ಮಾಂಡ ತರತಮವೂ ॥ ಮನವಚ ನದಿಂ ಸ್ಮರಿಸುವರ ಭವ- । ವನಧಿ ಶೋಷಿಸಿ ಪೋಗುವದು ಕಾ- । ರಣ ವೆನಿಸುವದು ಜ್ಞಾನಭಕ್ತಿ ವಿರಕ್ತಿ ಸಂಪದಕೆ ॥ ೧೭ ॥

ಅನಳನೊಳು ಪೋಷಿಸುವ ಹರಿಚಂ- । ದನವೆ ಮೊದಲಾದದರ ಸೂವಾ- । ಸನೆಯು ಪ್ರತ್ಪ್ರತ್ಯೇಕ ತೋರ್ಪದು ಯೆಲ್ಲಕಾಲದಲಿ ॥ ದನುಜ ಮಾನವ ದಿವಿಜರವರವ- । ರನುಚಿತೋಚಿತ ಕರ್ಮವು ಜನಾ- । ರ್ದನನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತಾ ॥ ೧೮ ॥

ಭಕ್ತವತ್ಸಲ ಭಾಗ್ಯಪುರುಷ ವಿ- । ವಿಕ್ತವಿಶ್ವಾಧಾರ ಸರ್ವೋ- । ದ್ರಿಕ್ತ ದೋಷವಿದೂರ ದುರ್ಗಮದುರ್ವಿಭಾವ್ಯ ಸ್ವಹೀ ॥ ಶಕ್ತಶಾಶ್ವತ ಸಕಲವೇದ್ಯೈ- । ಕೋಕ್ತಮಾನದ ಮಾನ್ಯಮಾಧವ । ಸೂಕ್ತ ಸೂಕ್ಷ್ಮ ಸ್ಥೂಲ ಶ್ರೀಜಗನ್ನಾಥವಿಟ್ಠಲನು ॥ ೧೯ ॥

ಅಂತು ಸಂಧಿ ೨೫ಕ್ಕೆ ಪದ ೮೩೩ಕ್ಕೆ ಆರೋಹಣತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೨೬. ಅವರೋಹಣತಾರತಮ್ಯಸಂಧಿ.

ಶ್ರೀಪರಮಾತ್ಮ, ಲಕ್ಷ್ಮೀ ಹಾಗೆಯೇ ಬ್ರಹ್ಮದೇವರ ಆರಂಭವಾದಿ ಮಾನುಷೋತ್ತಮರ ಪರ್ಯಂತ ತಾರತಮ್ಯ ಹೇಳುತ್ತಾರೆ.

॥ ಶ್ರೀವೇದವ್ಯಾಸಾಯ ನಮಃ ॥

ರಾಗ ಮುಖಾರಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:**—ಶ್ರೀರಮಣ ನಿಜಭಕ್ತರೆನಿಸುವ। ವಾರಿಜಾಸನ ಮುಖ್ಯನಿರ್ಜರ। ತಾರತಮ್ಯವ ಪೇಳ್ವೆ ಸಂತೋಷದಲಿ ಗುರುಬಲದೀ॥

ಕೇಶವಗೆ ನಾರಾಯಣಿಗೆ ಕಮ- । ಲಾಸನ ಸಮಿರಾರರಿಗೆ ವಾಣಿಗೆ । ವೀಶ ಫಣಿಪ ಮಹೇಶರಿಗೆ ಷಣ್ಮಹಿಳೆಯರ ಪದಕೆ ॥ ಶೇಷರುದ್ರರ ಪತ್ನಿಯರಿಗೆ ಸು- । ವಾಸವ ಪ್ರದ್ಯುಮ್ನರಿಗೆ ಸಂ- । ತೋಷದಿಂದಲಿ ವಂದಿಸುವೆ ಭಕ್ತಿಜ್ಞಾನಗೋಡಲೆಂದೂ ॥ ೧ ॥

ಪ್ರಾಣದೇವಗೆ ನಮಿಪೆ ಕಾಮನ। ಸೂನು ಮನು ಗುರು ದಕ್ಷ ಶಚಿ ರತಿ। ಮಾನಿನಿಯರಿಗೆ ಪ್ರವಹದೇವಗೆ ಸೂರ್ಯ ಸೋಮ ಯಮಾ॥ ಮಾನವಿಗೆ ವರುಣನಿಗೆ ವೀಣಾ- । ಪಾಣಿನಾರದಮುನಿಗೆ ನಮಿಸುವೆ। ಜ್ಞಾನಭಕ್ತಿ ವಿರಕ್ತಿಮಾರ್ಗವ ತಿಳಿಸಲೆನಗೆಂದು ॥ ೨ ॥

ಅನಲ ಭೃಗುದಾಕ್ಷಾಯಣಿಯರಿಗೆ । ಕನಕಗರ್ಭಜ ಸಪ್ತಋಷಿಗಳಿ- । ಗೆಣೆಯೆನಿಪ ವೈವಸ್ವತ ಸುಮನು ಗಾಧಿಸಂಭವಗೆ ॥ ದನುಜ ಸಿಋಋತಿ ತಾರ ಪ್ರವಹಾ। ವನಜಮಿತ್ರಗರ್ಭಿಣೀಗಣ । ಧನಪ ವಿಷ್ವಕ್ಸೇನರಿಗೆ ವಂದಿಸುವೆನನವರತಾ ॥ ೩ ॥

ಉಕ್ತದೇವರ್ಕಳನುಳಿದು ಯೆಂ- । ಭತ್ತಯಿದು ಜನರುಗಳು
ಮನುಗಳು- । ಚಥ್ಯಚಾವನಯಮುಳರಿಗೆ ಕರ್ಮಜರೆನಿಸುತಿಪ್ಪ ॥
ಕಾರ್ತವೀರ್ಯಾರ್ಜುನ ಪ್ರಮುಖ ಶ- । ತಸ್ಥರಿಗೆ ಪರ್ಜನ್ಯ ಗಂಗಾ- ।
ದಿತ್ಯ ಯಮಸೋಮಾನಿರುದ್ಧರ ಪತ್ನಿಯರ ಪದಕೆ ॥ ೪ ॥

ಹುತವಹಾರ್ಧಾಂಗಿನಿಗೆ ಚಂದ್ರಮ । ಸುತ ಬುಧಗೆ ನಾಮಾತ್ಮ
ತೋಷಾ- । ಸತಿಗೆ ಛಾಯಾತ್ಮಜಶನೈಶ್ಚರಗಾನಮಿಪೆ ಸತತ । ಪ್ರತಿದಿವ
ಸದಲಿ ಬಿಡದೆ ಜೀವ । ಪ್ರತತಿ ಮಾಡುವ ಗರ್ಮಗಳಿಗಧಿ- । ಪತಿಯೆನಿಪ
ಪುಷ್ಕರನ ಪಾದಾಂಬುಜಗಳಿಗೆ ನಮಿಪೇ ॥ ೫ ॥

ಆನಮಿಪೆ ಆಜಾನರಿಗೆ ಸುಕೃ- । ಶಾನುಸುತರಿಗೆ ಗೋವ್ರಜದೊ
ಳಿಹ । ಮಾನಿನಿಯರಿಗೆ ಚಿರಪಿತೃ ಶತನ್ಯೂನ ಶತಕೋಟಿ ॥ ಮೌನಿಜ
ರಿಗೇ ದೇವ ಮಾನವ । ಗಾನಪ್ರೌಢರಿಗವನಿಪರಿಗೆ ರ- । ಮಾನಿವಾಸನ
ದಾಸವರ್ಗಕೆ ನಮಿಪೆನನವರತಾ ॥ ೬ ॥

ಅನುಕ್ರಮಣಿಕಾತಾರತಮ್ಯವ- । ನನುದಿನದಿ ಸದ್ಭಕ್ತಿಪೂರ್ವಕ ।
ನೆನವರಿಗೆ ಧರ್ಮಾರ್ಥಕಾಮಾದಿಗಳು ಫಲಿಸುವವೂ ॥ ವನಜಸಂಭವ
ಮುಖ್ಯರವಯವ । ರೆನಿಸುವ ಜಗನ್ನಾಥವಿಠಲಗೆ । ವಿನಯದಿಂದಲಿ
ನಮಿಸಿ ಕೊಂಡಾಡುತಿರು ಮರೆಯದಲೆ ॥ ೭ ॥

ಅಂತು ಸಂಧಿ ೨೬ಕ್ಕೆ ಪದ ೪೪೦ಕ್ಕೆ ಅವರೋಹಣತಾರತಮ್ಯಸಂಧಿ ಸಮಾಪ್ತ

ಶ್ರೀಕೃಷ್ಣಾರ್ಪಣಮಸ್ತು.



# ೨೭. ಅನುಕ್ರಮಣಿಕಾತಾರತಮ್ಯಸಂಧಿ.

ತಾರತಮ್ಯಜ್ಞಾನ ದಾರ್ಢ್ಯವಾಗಲೆಂದು ಸಮೂಹ ತಾರತಮ್ಯ ನೀಚ ಕ್ರಮದಿಂದ ಹೇಳುತ್ತಾರೆ.

॥ ಶ್ರೀಹಯವದನಾಯ ನಮಃ ॥

ರಾಗ ಸಾವೇರಿ, ರೂಪಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:**—ಮಾನುಷೋತ್ತಮ ಪಿಡಿದು ಸಂಕರು- । ಷಣನ ಪರಿಯಂತರದಿ ಪೇಳಿರು- । ವನುಕ್ರಮಣಿಕೆಯ ಪದ್ಯವನು ಕೇಳುವುದು ಸಜ್ಜನರು ॥

ಶ್ರೀಮದಾಚಾರ್ಯರ ಮತಾನುಗ । ಧೀಮತಾಂ ವರರಂಘ್ರಿಕಮಲಕೆ । ಸೋಮಪಾನಾರ್ಹರಿಗೆ ತಾತ್ವಿಕ ದೇವತಾಗಣಕೆ ॥ ಹೈಮವತಿ ಷಣ್ಮಹಿಷಿಯರ ಪದ । ವ್ಯೋಮಕೇಶಗೆ ವಾಣಿ ವಾಯು ಸು- । ತಾಮರಸಭವ ಲಕ್ಷ್ಮಿನಾರಾಯಣರಿಗಾನಮಿಪೆ ॥ ೧ ॥

ಶ್ರೀಮತಾಂವರ ಶ್ರೀಪತೇ ಸ- । ತ್ಕಾಮಿತಪ್ರದ ಸೌಮ್ಯ ತ್ರಿಕಕು- । ಬ್ಧಾಮ ತ್ರಿಚತುಷ್ಪಾದಪಾವನಚರಿತ ಚಾರ್ವಂಗಾ ॥ ಗೋಮತಿಪ್ರಿಯ ಗೌಣ ಗುರುತಮ । ಸಾಮಗಾಯನಲೋಲ ಸರ್ವ- । ಸ್ವಾಮಿ ಮಮ ಕುಲದೈವ ಸಂತೈಸುವದು ಸಜ್ಜನರಾ ॥ ೨ ॥

ರಾಮ ರಾಕ್ಷಸಕುಲಭಯಂಕರ । ಸಾಮಜೇಂದ್ರಪ್ರಿಯ ಮನೋವಾ- । ಚಾಮಗೋಚರ ಚಿತ್ಸುಖಪ್ರದ ಚಾರುತರಚರಿತಾ ॥ ಭೂಮ ಭೂಸ್ವರ್ಗಾಪವರ್ಗದ । ಕಾಮಧೇನು ಸುಕಲ್ಪತರು ಚಿಂ- । ತಾಮಣೀಯೆಂದೆನಿಪ ನಿಜಭಕ್ತರಿಗೆ ಸರ್ವತ್ರಾ ॥ ೩ ॥

ಸ್ವರ್ಣವರ್ಣ ಸ್ವತಂತ್ರ ಸರ್ವಗ । ಕರ್ಣಹೀನಸುಶಯ್ಯ ಶಾಶ್ವತ । ವರ್ಣ ಚತುರಾಶ್ರಮ ವಿವರ್ಜಿತ ಚಾರುತರ ಸ್ವರತಾ ॥ ಅರ್ಣಸಂಪ್ರತಿಪಾದ್ಯ ವಾಯುಸು- । ಪರ್ಣವರವಹನಪ್ರತಿಮ ವಟ- । ಪರ್ಣಶಯನಾಶ್ಚರ್ಯತಮ ಸಚ್ಚರಿತ ಗುಣಭರಿತಾ ॥ ೪ ॥

ಅಗಣಿತ ಸುಗುಣಧಾಮ ನಿಷ್ಕಲ । ಸ್ವಗತಭೇದವಿಶೂನ್ಯ ಶಾಶ್ವತ । ಜಗದ ಜೀವಾತ್ಯಂತ ಭಿನ್ನಾಪನ್ನಪರಿಪಾಲ ॥ ತ್ರಿಗುಣವರ್ಜಿತ ತ್ರಿಭುವನೇಶ್ವರ । ಹಗಲಿರುಳು ಸ್ಮರಿಸುತಲಿಹರ ಬಿ- । ಟ್ಟಗಲ ಶ್ರೀಜಗನ್ನಾಥ ವಿಟ್ಠಲ ವಿಶ್ವವ್ಯಾಪಕನೊ ॥ ೫ ॥

ಸಂಧಿ ೨೭ಕ್ಕೆ ಪದ ೮೪೫ಕ್ಕೆ ಅನುಕ್ರಮಣಿಕಾತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



## ೨೮. ಗಣಪತಿಸ್ತೋತ್ರಸಂಧಿ.

ಯಾವಾತನ ಪರಮಾನುಗ್ರಹದಿಂದ ಪರಲೋಕಸಾಧನವು ನಿರ್ವಿಘ್ನ ಪೂರ್ವಕ ನಡಿಯುತ್ತಿದೆಯೋ ಅಂಥಾ ವಿಘ್ನರಾಜನ ಸ್ತವನವನ್ನು ರಂಗೋಲೆದಾಸರೆನಿಸಿದ ಶ್ರೀಮಜ್ಜಗನ್ನಾಥದಾಸರಾಯರು ಈ ಸಂಧಿಯಲ್ಲಿ ಮಾಡುತ್ತಾರೆ.



॥ ವಿಶ್ವಂಭರಮೂರ್ತಯೇ ನಮಃ ॥

ರಾಗ ಆರಭಿ, ಮಟ್ಟೆತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀಶನಂಘ್ರಿಸರೋಜಭೃಂಗ ಮ- । ಹೇಶಸಂಭವ ಮನ್ಮನದೊಳು ಪ್ರ- । ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದಾ ॥ ನೀಸಲಹು ಸಜ್ಜನರ ವೇದ- । ವ್ಯಾಸಕರುಣಾಪಾತ್ರ ಮಹದಾ- । ಕಾಶಪತಿ ಕರುಣಾಳು ಕೈಪಿಡಿದೆಮ್ಮನುದ್ಧರಿಸೊ ॥ ೧ ॥

ಏಕದಂತ ಇಭೇಂದ್ರಮುಖ ಚಾ- । ಮೀಕರಕೃತಭೂಷಣಾಂಗ ಕೃ- । ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆನಿನಿತೆಂದೂ ॥ ನಾಕನಿಲ ಯನ ನುತಿಸುತಿಪ್ಪ ವಿ- । ವೇಕಿಗಳ ಸಹವಾಸ ಸುಖಗಳ । ನೀ ಕರುಣಿ ಸುವದೆನಗೆ ಸಂತತ ಪರಮಕರುಣಾಳೂ ॥ ೨ ॥

ವಿಘ್ನರಾಜನೆ ದುರ್ವಿಷಯದೊಳು । ಮಗ್ನವಾಗಿಹ ಮನವ ಮಹ ದೋ- । ಷಘ್ನನಂಘ್ರಿಸರೋಜಯುಗಳದಿ ಭಕ್ತಿಪೂರ್ವಕದಿ ॥ ಲಗ್ನವಾ ಗಲಿ ನಿತ್ಯನರಕಭ- । ಯಾಗ್ನಿಗಳಿಗಾನಂಜೆ ಗುರುವರ । ಭಗ್ನಗೈಸೆನ್ನವ ಗುಣಗಳನು ಪ್ರತಿದಿವಸದಲ್ಲಿ ॥ ೩ ॥

ಧನಪವಿಷ್ವಕ್ಸೇನವೈದ್ಯಾ- । ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ- । ನನುಜ ಶೇಷಶತಸ್ಥ ದೇವೋತ್ತಮ ವಿಯದ್ಗಂಗಾ- ॥ ವಿನುತ ವಿಶ್ವೋ ಪಾಸಕನೆ ಸ- । ನ್ಮನದಿ ವಿಜ್ಞಾಪಿಸುವೆ ಲಕ್ಷ್ಮೀ- । ವನಿತೆಯರಸನ ಭಕ್ತಿ ಜ್ಞಾನವ ಕೊಟ್ಟು ಸಲಹುವದೂ ॥ ೪ ॥

ಚಾರುದೇಷ್ಣಾಹ್ವಯನೆನಿಸಿ ಅವ- । ತಾರಮಾಡಿದೆ ರುಗ್ಮಿಣೀ ಯಲಿ । ಗೌರಿಯರಸನ ವರದಿ ವುದ್ಧಟರಾದ ರಾಕ್ಷಸರಾ ॥ ಶೌರಿಯಾ ಜ್ಞದಿ ಸಂಹರಿಸಿ ಭೂ- । ಭಾರಯಿಳುಹಿದ ಕರುಣಿ ತ್ವತ್ಪಾ- । ದಾರವಿಂ ದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ॥ ೫ ॥

ಶೂರ್ಪಕರ್ಣ ವಿರಾಜಿತೇಂದುವ । ದರ್ಪಹರ ವುದಿತಾರ್ಕ ಸನ್ನಿಭ । ಸರ್ಪವರಕಟಿಸೂತ್ರ ವೈಕೃತಗಾತ್ರ ಸುಚರಿತ್ರ ॥ ಸ್ವರ್ಪಿತಾಂ ಕುಶಪಾಶಕರ ಖಳ । ದರ್ಪಭಂಜನ ಕರ್ಮಸಾಕ್ಷಿಗ । ತರ್ಪಕನು ನೀನಾಗಿ ತೃಪ್ತಿಯ ಬಡಿಸು ಸಜ್ಜನರಾ ॥ ೬ ॥

ಖೇಶ ಪರಮಸುಭಕ್ತಿಪೂರ್ವಕ । ವ್ಯಾಸಕೃತಗ್ರಂಥಗಳನರಿತು ಪ್ರ- । ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೊ ಲೋಕದೊಳೂ ॥ ಪಾಶ ಪಾಣಿಯೆ ಪ್ರಾರ್ಥಿಸುವೆನುಪ- । ದೇಶಿಸೆನಗದರರ್ಥಗಳ ಕರು- । ಣಾಸ ಮುದ್ರ ಕೃಪಾಕಟಾಕ್ಷದಿ ನೋಡೊ ಪ್ರತಿದಿನದೀ ॥ ೭ ॥

ಶ್ರೀಶನತಿನಿರ್ಮಲಸುನಾಭೀ-। ದೇಶವಸ್ಥಿತ ರಕ್ತ ಶೃಂಗಗ-। ದಾಸು ಶೋಭಿತಗಾತ್ರ ಲೋಕಪವಿತ್ರ ಸುರಮಿತ್ರಾ ॥ ಮೂಷಕಾಸುರವಹನ ಪ್ರಾಣಾ-। ವೇಶಯುತ ಪ್ರಖ್ಯಾತ ಪ್ರಭು ಪೂ-। ರೈಸು ಭಕ್ತರು ಬೇಡಿ ದಿಷ್ಟಾರ್ಥಗಳ ಪ್ರತಿದಿನದೀ ॥ ೮ ॥

ಶಂಕರಾತ್ಮಜ ದೈತ್ಯರಿಗತಿಭ-। ಯಂಕರಗತಿಗಳೀಯಲೋಸುಗ। ಸಂಕಟ ಚತುರ್ಥಿಗನೆನಿಸಿಯಹಿತಾರ್ಥಗಳ ಕೊಟ್ಟು ॥ ಮಂಕುಗಳ ಮೋಹಿಸುವೆ ಚಕ್ರಧ-। ರಾಂಕಿತನೆ ದಿನದಿನದಿ ತ್ವತ್ಪದ। ಪಂಕಜಗಳಿಗೆ ಯೆರಗಿ ಬಿನ್ನೈಸುವೆನು ಪಾಲಿಪುದೂ ॥ ೯ ॥

ಸಿದ್ಧವಿದ್ಯಾಧರಗಣಸಮಾ-। ರಾಧ್ಯಚರಣಸರೋಜ ಸರ್ವಸು-। ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನಪವಾ ॥ ಬುದ್ಧಿವಿದ್ಯಾಜ್ಞಾನ ಬಲ ಪರಿ-। ಶುದ್ಧಭಕ್ತಿ ವಿರಕ್ತಿನಿರುತನ-। ವದ್ಯನ ಸ್ಮೃತಿಲೀಲೆಗಳ ಸುಸ್ತವನ ವದನದಲೀ ॥ ೧೦ ॥

ರಕ್ತವಾಸದ್ವಯವಿಭೂಷಣ। ಉಕ್ತಿಲಾಲಿಸು ಪರಮಭಗವ-। ದ್ಭಕ್ತವರ ಭವ್ಯಾತ್ಮ ಭಾಗವತಾದಿ ಶಾಸ್ತ್ರದಲೀ ॥ ಸಕ್ತವಾಗಲಿ ಮನವು ವಿಷಯ ವಿ-। ರಕ್ತಿಪಾಲಿಸು ವಿದ್ವದಾರ್ಯ ವಿ-। ಮುಕ್ತನೆಂದೆನಿಸೆನ್ನ ಭವಭಯದಿಂದ ಕರುಣದಲಿ ॥ ೧೧ ॥

ಶುಕ್ರಶಿಷ್ಯರ ಸಂಹರಿಪುದಕೆ। ಶಕ್ರ ನಿನ್ನನು ಪೂಜಿಸಿದನು ಉ-। ರುಕ್ರಮನು ಶ್ರೀರಾಮಚಂದ್ರನು ಸೇತುಮುಖದಲ್ಲಿ ॥ ಚಕ್ರವರ್ತೀ ಧರ್ಮರಾಜನು। ಚಕ್ರಪಾಣಿಯ ನುಡಿಗೆ ಭಜಿಸಿದ। ವಕ್ರತುಂಡನೆ ನಿನ್ನೊಳೆಂತುಟೊ ಈಶನುಗ್ರಹವು ॥ ೧೨ ॥

ಕೌರವೇಂದ್ರನು ನಿನ್ನ ಭಜಿಸದ। ಕಾರಣದಿ ನಿಜಕುಲಸಹಿತ ಸಂ-। ಹಾರವೈದಿದ ಗುರುವರವೃಕೋದರನ ಗದೆಯಿಂದಾ ॥ ತಾರಕಾಂತಕನನುಜ ಯೆನ್ನ ಶ-। ರೀರದೊಳು ನೀ ನಿಂತು ಧರ್ಮ। ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ ॥ ೧೩ ॥

ಏಕವಿಂಶತಿ ಮೋದಕಪ್ರಿಯ । ಮೂಕರನು ವಾಗ್ಮಿಗಳ ಮಾಳ್ಪ ಕೃ- । ಪಾಕರೇಶ ಕೃತಜ್ಞ ಕಾಮದ ಕಾಯೊ ಕೈಪಿಡಿದು ॥ ಲೇಖಕಾಗ್ರಣಿ ಮನ್ಮನದ ದು- । ರ್ವ್ಯಾಕುಲವ ಪರಿಹರಿಸು ದಯದಿ ಪಿ- । ನಾಕಿ ಭಾರ್ಯಾತನುಜ ವೃದ್ಧವ ಪ್ರಾರ್ಥಿಸುವೆ ನಿನಗೆ ॥ ೧೪ ॥

ನಿತ್ಯ ಮಂಗಲಚರಿತ ಜಗದು- । ತ್ಪತ್ತಿ ಸ್ಥಿತಿಲಯನಿಯಮನ ಜ್ಞಾ- । ನತ್ರಯಪ್ರದ ಬಂಧಮೋಚಕ ಸುಮನಸಾಸುರರಾ ॥ ಚಿತ್ತವೃತ್ತಿ ಗಳಂತೆ ನಡೆವ ಪ್ರ- । ಮತ್ತನಲ್ಲ ಸುಹೃಜ್ಜನಾಪ್ತನ । ನಿತ್ಯದಲಿ ನೆನನೆನದು ಸುಖಿಸುವ ಭಾಗ್ಯ ಕರುಣಿಪುದು ॥ ೧೫ ॥

ಪಂಚಭೇದಜ್ಞಾನವರುಪು ವಿ- । ರಿಂಚಿಜನಕನ ತೋರು ಮನದಲಿ । ವಾಂಛಿತಪ್ರದ ಮಲಿಮೆಯಿಂದಲಿ ದಾಸನೆಂದರಿದೂ ॥ ಪಂಚವ ಕ್ತ್ರನ ತನಯ ಭವದೊಳು । ವಂಚಿಸಿದೆ ಸಂತೈಸು ವಿಷಯದಿ । ಸಂಚರಿಸದಂದದಲಿ ಮಾಡು ಮನಾವಿಕರಣಗಳ ॥ ೧೬ ॥

ಏನುಬೇಡುವದಿಲ್ಲ ನಿನ್ನ ಕು- । ಯೋನಿಗಳು ಬರಲಂಜೆ ಲಕ್ಷ್ಮೀ । ಪ್ರಾಣಪತಿ ತತ್ವೇಶರಿಂದೊಡಗೂಡಿ ಗುಣಕಾರ್ಯ ॥ ತಾನೆ ಮಾಡುವನೆಂಬ ಈ ಸು- ॥ ಜ್ಞಾನವೇ ಕರುಣಿಸುವುದೆನಗೆ ಮ- । ಹಾನುಭಾವ ಮುಹುರ್ಮುಹುಃ ಪ್ರಾರ್ಥಿಸುವೆ ಯಿನಿತೆಂದು ॥ ೧೭ ॥

ನಮೊನಮೋ ಗುರುವರ್ಯ ವಿಬುಧೋ- । ತ್ತಮ ವಿವರ್ಜಿತನಿದ್ರ ಕಲ್ಪ- । ದ್ರುಮನೆನಿಪೆ ಭಜಕರಿಗೆ ಬಹುಗುಣಭರಿತ ಶುಭಚರಿತಾ ॥ ಉಮೆಯ ನಂದನ ಪರಿಹರಿಸು ಹಂ- । ಮಮತೆ ಬುಧ್ಯಾದಿಂದ್ರಿಯಗಳಾ- । ಕ್ರಮಿಸಿ ದಣಿಸುತಲಿಹವು ಭವದೊಳಗಾವಕಾಲದಲೀ ॥ ೧೮ ॥

ಜಯಜಯತು ವಿಘ್ನೇಶ ತಾಪ- । ತ್ರಯವಿನಾಶನ ವಿಶ್ವಮಂಗಳ । ಜಯಜಯತು ವಿಘ್ನಪ್ರದಾಯಕ ವೀತಭಯಶೋಕಾ ॥ ಜಯಜಯತು ಚಾರ್ವಂಗ ಕರುಣಾ । ನಯನದಿಂದಲಿ ನೋಡಿ ಜನ್ಮಾ- । ಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ॥ ೧೯ ॥

ಕಡುಕರುಣಿ ನೀನೆಂದರಿದು ಹೇ- । ರೊಡಲ ನಮಿಸುವೆ ನಿನ್ನ ಡಿಗೆ ಬೆಂ- । ಬಿಡದೆ ಪಾಲಿಸು ಪರಮಕರುಣಾಸಿಂಧು ಯೆಂದೆಂದು ॥ ನಡು ನಡುವೆ ಬರುತಿಪ್ಪ ವಿಘ್ನವ । ತಡೆದು ಭಗವನ್ನಾಮಕೀರ್ತನೆ । ನುಡಿನು ಡಿಗೆ ಯೆನ್ನಿಂದ ಪ್ರತಿದಿವಸದಲಿ ಮರಿಯದಲೆ ॥ ೨೦ ॥

ಏಕವಿಂಶತಿ ಪದಗಳೆನಿಸುವ । ಕೋಕನದ ವನಮಾಲಿಕೆಯು ಮೈ- । ನಾಕಿತನಯಾಂತರ್ಗತ ಶ್ರೀಪ್ರಾಣಪತಿಯೆನಿಪಾ ॥ ಶ್ರೀಕರಜಗ ನ್ನಾಥವಿಟ್ಠಲ । ಸ್ವೀಕರಿಸಿ ಸ್ವರ್ಗಾಪವರ್ಗದಿ । ತಾ ಕೊಡುವ ಸೌಖ್ಯ ಗಳ ಭಕತರಿಗಾವಕಾಲದಲಿ ॥ ೨೧ ॥

ಅಂತು ಸಂಧಿ ೨೪ಕ್ಕೆ ಪದ ೮೬೬ಕ್ಕೆ ಗಣಪತಿಸ್ತೋತ್ರಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.

## ೨೯. ಅಣುತಾರತಮ್ಯಸಂಧಿ.

ಇದರಲ್ಲಿ ತೀವ್ರ ಬುದ್ಧ್ಯಾರೂಢವಾಗುವಂತೆ ಪರಮಾತ್ಮನ ಆರಂಭ ಮಾಡಿ ದೈತ್ಯರ ಪರಿಯಂತ ಸಂಕೋಚವಾಗಿ ತಾರತಮ್ಯ ಹೇಳುತ್ತಾರೆ.

॥ ಶ್ರೀಮಧುಸೂದನಾಯ ನಮಃ ॥

ರಾಗ ಸುರಟಿ, ಅಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ವಿಷ್ಣು ಸರ್ವೋತ್ತಮನು ಪ್ರಕೃತಿ ಕ- । ನಿಷ್ಠಳೆನಿಪಾನಂತಗುಣ ಪರ- । ಮೇಷ್ಠಿಪವನರು ಕಡಿಮೆ ವಾಣೀಭಾರತಿಗಳಧಮಾ ॥ ವಿಷ್ಣುವಹನ ಫಣೀಂದ್ರಮೃಡರಿಗೆ । ಕೃಷ್ಣಮಹಿಷಿಯರಧಮರಿವರೊಳು । ಶ್ರೇಷ್ಠಳೆನಿ ಪಳು ಜಾಂಬವತಿಯಾವೇಶಬಲದಿಂದಾ ॥ ೧ ॥

ಪ್ಲವಗಪನ್ನಗಪಾಹಿಭೂಷಣ । ಯುವತಿಯರು ಸವು ತವೊ್ಳಗೆ ಜಾಂ- । ಬವತಿಗಿಂದಲು ಕಡಿಮೆ ಯಿವರಿಂದಿಂದ್ರಕಾಮರಿಗೆ ॥ ಅವರಪ್ರಾಣನು ಕಡಿಮೆ ಕಾಮನ । ಕುವರ ಶಚಿ ರತಿ ದಕ್ಷ ಗುರು ಮನು । ಪ್ರವಹಮಾರುತ ಕೊರತೆಯೆನಿಸುವನಾರುಜನರಿಂದಾ ॥ ೨ ॥

ಯಮ ದಿವಾಕರ ಚಂದ್ರ ಮಾನವಿ । ಸಮರು ಕೋಣಪ್ರವಹಗ ಧಮರು । ದ್ಯುಮಣಿಗಿಂದಲಿ ವರುಣ ನೀಚನು ನಾರದಾಧಮನು ॥ ಸುಮನಸಾಖ್ಯಪ್ರಸೂತಿ ಭೃಗುಮುನಿ । ಸಮರು ನಾರದಗಧಮನತ್ರಿ । ಪ್ರಮುಖ ವಿಶ್ವಾಮಿತ್ರ ವೈವಸ್ವತರನಲಗಧಮಾ ॥ ೩ ॥

ಮಿತ್ರ ತಾರಾ ನಿಋಋತಿ ಪ್ರವಹ। ಪತ್ನಿ ಪ್ರಾವಹಿ ಸಮರು ಹಿಶ್ವಾ-। ಮಿತ್ರಗಿಂದಲಿ ಕೊರತೆ ವಿಷ್ವಕ್ಸೇನ ಗಣನಾಥಾ ॥ ವಿತ್ತಪತಿ ಅಶ್ವಿನಿಗಳಧಮರು । ಮಿತ್ರ ಮೊದಲಾದವರಿಗಿಂದಲು । ಬಿತ್ತರಿಪೆನು ಶತಸ್ಥ ದಿವಿಜರ ವ್ಯೂಹನಾಮಗಳಾ ॥ ೪ ॥

ಮರುತರೊಂಭತ್ತಧಿಕ ನಾಲ್ವ- । ತ್ತೆರಡು ಅಶ್ವಿನಿ ವಿಶ್ವದೇವರು । ಯೆರಡಯಿದು ಹನ್ನೊಂದು ರುದ್ರರು ದ್ವಾದಶಾದಿತ್ಯಾ ॥ ಗುರು ಪಿತೃತ್ರಯವಷ್ಟವಸುಗಳು । ಭರತ ಭಾರತಿ ಪೃಥ್ವಿಋಭುವೆಂ- । ದರಿವುದಿವರನು ಸೋಮರಸಪಾನಾರ್ಹರಹುದೆಂದು ॥ ೫ ॥

ಈದಿವೌಕಸರೊಳಗೆ ವುಕ್ತರು । ಐದಧಿಕ ದಶವುಳಿದ ಯೆಂಭ- । ತ್ತೈದು ಶೇಷರಿಗೆಣೆಯೆನಿಸುವರು ಧನಪ ವಿನಯಕರೂ ॥ ಸಾಧುವೈವಸ್ವತಸ್ವಯಂಭುವ। ಶ್ರೀದತಾಪಸರುಳಿದು ಮನುವೇ-। ಕಾದಶರು ವಿಷ್ನೇಶನಿಂದಲಿ ನೀಚರೆನಿಸುವರು ॥ ೬ ॥

ಚವನನಂದನ ಕವಿ ಬೃಹಸ್ಪತಿ- । ಯುವರಜನುಚಥ್ಯಮುನಿಪಾವಕ । ಧ್ರುವ ನಹುಷ ಶಶಿಬಿಂದು ಪ್ರಿಯವ್ರತನು ಪ್ರಹ್ಲಾದಾ ॥ ಕುವಲಯಪರುಕ್ತೇಶರಿಂದಲಿ । ಅವರ ರೋಹಿಣಿ ಶಾಮಲಾ ಜಾ- । ಹ್ನವಿ ವಿರಾಟ್ಪರ್ಜನ್ಯಸಂಜ್ಞಾದೇವಿಯರು ಅಧಮಾ ॥ ೭ ॥

ದ್ಯುನದಿಗಿಂದಲಿ ನೀಚರೆನಿಪರು । ಅನಭಿಮಾನಿ ದಿವೌಕಸರು ಕೇ- । ಚನ ಮುನಿಗಳಿಗೆ ಕಡಿಮೆ ಸ್ವಾಹಾದೇವಿಗಧಮ ಬುಧ ॥ ಎನಿಸು ವಳುಷಾ ದೇವಿ ನೀಚಳು । ಶನಿಕಡಿಮೆ ಕರ್ಮಾಧಿಪತಿ ಸ- । ದ್ವಿನುತ ಪುಷ್ಕರ ನೀಚನೆನಿಸುವ ಸೂರ್ಯನಂದನಗೆ ॥ ೮ ॥

ಕೊರತೆಯೆನಿಪರಶೀತಿ ಋಷಿ ಪು- । ಷ್ಕರಗೆ ಊರ್ವಶಿ ಮುಖ್ಯ ಶತಮ- । ಪ್ಸರರು ತುಂಬುರಮುಖರು ಆಜಾನಜರೆನಿಸುತಿಹರು ॥ ಕರೆಸು ವದು ಅನಳಗಣ ನಾಲ್ವ- । ತ್ತರೆ ಚತುರ್ದಶದ್ವ್ಯಷ್ಟಸಾವಿರ । ಹರಿಮಡ ದಿಯರು ಸಮರೆನಿಸುವರು ಪಿಂತೆ ಪೇಳ್ವರಿಗೆ ॥ ೯ ॥

ತದವರರನಾಖ್ಯಾತಮಪ್ಸರ । ಸುದತಿಯರು ಕೃಷ್ಣಾಂಗ ಸಂಗಿ ಗ- । ಳದರ ತರುವಾಯದಲಿ ಚಿರಪಿತರುಗಳು ಯಿವರಿಂದಾ ॥ ತ್ರಿದಶಗಂ ಧರ್ವಗಣ ಯಿವರಿಂ- । ದಧಮ ನರಗಂಧರ್ವರಿವರಿಂ- । ದುದಧಿಮೇಖ ಳಪತಿಗಳಧಮರು ನೂರುಗುಣದಿಂದ ॥ ೧೦ ॥

ಪೃಥ್ವಿಪತಿಗಳಿಗಿಂದ ಶತಮನು- । ಜೋತ್ತಮರು ಕಡಿಮೆನಿಪರಿವ ರಿಂ- । ದುತ್ತರೋತ್ತರ ನೂರುಗುಣದಿಂದಧಿಕರಾದವರಾ ॥ ನಿತ್ಯದಲಿ ಚಿಂತಿಸುತ ನಮಿಸುತ । ಭೃತ್ಯನಾನಹುದೆಂಬ ಭಕತರ । ಚಿತ್ತದಲಿ ನೆಲೆ ಗೊಂಡು ಕರುಣಿಪರಖಿಳ ಸೌಖ್ಯಗಳಾ ॥ ೧೧ ॥

ದ್ರುಮಲತಾತೃಣಗುಲ್ಮ ಜೀವರು । ಕ್ರಮದಿ ನೀಚರು ಯಿವರಿ ಗಿಂದಾ- । ಧಮರೆನಿಸುವರು ನಿತ್ಯಬದ್ಧರಿಗಿಂದಲಜ್ಞಾನಿ ॥ ತಮಸಿಗ್ಯೋ ಗ್ಯರ ಭೃತ್ಯರಧಮರು । ಅಮರುಷಾದ್ಯಭಿಮಾನಿ ದೈತ್ಯರು । ನಮುಚಿ ಮೊದಲಾದವರಿಗಿಂದಲಿ ವಿಪ್ರಚಿತಿ ನೀಚಾ ॥ ೧೨ ॥

ಅಲಕುಮಿಯು ತಾ ನೀಚಳೆನಿಪಳು । ಕಲಿ ಪರಮನೀಚತಮನವ ನಿಂ- । ದುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ರಯದಿ ॥ ಮಲವಿಸ ರ್ಜನ ಕಾಲದಲಿ ಕ- । ತ್ತಲೆಯೊಳಗೆ ಕಶ್ಮಲ ಕುಮಾರ್ಗ- । ಸ್ಥಳಗಳಲಿ ಚಿಂತನೆಯ ಮಾಳ್ಪದು ಬಲ್ಲವರು ನಿತ್ಯ ॥ ೧೩ ॥

ಸತ್ವ ಜೀವರ ಮಾನಿ ಬ್ರಹ್ಮನು । ನಿತ್ಯ ಬದ್ಧರೊಳಗೆ ಪುರಂಜನ । ದೈತ್ಯ ಸಮುದಾಯಾಧಿಪತಿ ಕಲಿಯೆನಿಪ ಪವಮಾನ ॥ ನಿತ್ಯದಲಿಯುವ ರೊಳಗೆ ಕರ್ಮ ಪ್ರ- । ವರ್ತಕನು ತಾನಾಗಿ ಶ್ರೀ ಪುರು- । ಷೋತ್ತಮನ ಸಂಪ್ರೀತಿಗೋಸುಗ ಮಾಡಿ ಮಾಡಿಸುವಾ ॥ ೧೪ ॥

ಪ್ರಾಣದೇವನು ತ್ರಿವಿಧರೊಳಗೆ ಪ್ರ- । ವೀಣ ತಾನೆಂದೆನಿಸುತಧಿಕಾ- । ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವಾ ॥ ಜ್ಞಾನ ಭಕ್ತಿ ಸುರರ್ಗೆ ಮಿಶ್ರ । ಜ್ಞಾನ ಮಧ್ಯಮ ಜೀವರಿಗೆ ಅ- । ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪಾ ॥ ೧೫ ॥

ದೇವ ದೈತ್ಯರ ತಾರತಮ್ಯವ- । ನೀ ವಿಧದಿ ತಿಳಿದೆಲ್ಲರೊಳು ಲ- । ಕ್ಷ್ಮೀವರನೆ ಸರ್ವೋತ್ತಮನು ಯೆಂದರಿದು ನಿತ್ಯದಲಿ ॥ ಸೇವಿಸುವ ಭಕ್ತರಿಗೊಲಿದು ಸುಖ- । ವೀವ ಸರ್ವತ್ರದಲಿ ಸುಖಮಯ । ಶ್ರೀ ವಿರಿಂಚಾದ್ಯಮರನುತ ಜಗನ್ನಾಥ ವಿಟ್ಠಲನೂ ॥ ೧೬ ॥

ಅಂತು ಸಂಧಿ ೨೯ಕ್ಕೆ ಪದ ೮೮೨ಕ್ಕೆ ಅಣುತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೩೦. ದೈತ್ಯತಾರತಮ್ಯಸಂಧಿ.

ದೇವತಾ ತಾರತಮ್ಯವತ್ ದೈತ್ಯರ ತಾರತಮ್ಯವೂ ತಿಳಿಯತಕ್ಕದ್ದು ಪರಮಾವಶ್ಯಕವಾದ್ದರಿಂದ ದೈತ್ಯರ ಸ್ವಭಾವ ಅವರ ಗುಣ ಮೊದಲಾದ ವನ್ನು ಹೇಳುತ್ತಾರೆ.

॥ ಶ್ರೀ ಧನ್ವಂತರಯೇ ನಮಃ ॥

ರಾಗ ಕಾಪಿ, ರೂಪಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

**ಸಂಧಿಸೂಚನೆ:**—ಶ್ರೀಶ ಮುಕ್ತಾಮುಕ್ತ ಸುರವರ । ವಾಸು ದೇವಗೆ ಭಕ್ತಿಯಲಿ ಕಮ- । ಲಾಸನನು ಪೇಳಿದನು ದೈತ್ಯಸ್ವಭಾವ ಗುಣಗಳನೂ ॥

ಎನಗೆ ನಿನ್ನಲಿ ಭಕ್ತಿಜ್ಞಾನಗ- । ಳೆನಿತಿಹವು ಪ್ರಾಣನಲಿ ತಿಳಿಯದೆ । ಹನುಮದಾದ್ಯವತಾರಗಳ ಭೇದಗಳ ಪೇಳುವವಾ ॥ ದನುಜ ಘೋರಾಂಧಂತಮಸಿಗ್ಯೋ- । ಗ್ಯನು ನಸಂಶಯ ನಿನ್ನ ಬೈವರ । ಕೊನೆಯ ನಾಲಿಗೆ ಪಿಡಿದು ಭೇದಿಪೆನೆಂದನಬ್ಜಭವಾ ॥ ೧ ॥

ಜ್ಞಾನಬಲಸುಖಪೂರ್ಣ ವ್ಯಾಪ್ತಗೆ । ಹೀನ ಗುಣನೆಂಬುವನು ಈಶ್ವರ । ನಾನೆ ಯೆಂಬುವ ಸಚ್ಚಿದಾನಂದಾತ್ಮಗುತ್ಪತ್ತಿ ॥ ಶ್ರೀನಿತಂಬಿನಿಗೀಶಗೆ ವಿಯೋ- । ಗಾನುಚಿಂತನೆ ಭೇದ ಭೇದವಿಹೀನದೇಹಗೆ ಶಸ್ತ್ರಗಳ ಭಯ ಪೇಳುವವ ದೈತ್ಯಾ ॥ ೨ ॥

ಲೇಶಭಯಶೋಕಾದಿ ಶೂನ್ಯಗೆ । ಕ್ಲೇಶಗಳು ಪೇಳುವವ ರಾಮ । ವ್ಯಾಸ ರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ ॥ ದಾಶರಥಿ ಕೃಷ್ಣಾದಿ ರೂಪಕೆ । ಕೇಶ ಖಂಡನ ಪೇಳ್ವ ಮಕ್ಕಳಿ- । ಗೋಸುಗ ಶಿವಾರ್ಚನೆಯ ಮಾಡಿದನೆಂಬುವನೆ ದೈತ್ಯಾ ॥ ೩ ॥

ಪಾಪಪರಿಹಾರಾರ್ಥ ರಾಮನು- । ಮಾಪತಿಯು ನಿರ್ಮಿಸಿದ ಭಗವ- । ದ್ರೂಪ ರೂಪಗೆ ಭೇದ ಚಿಂತನೆ ಮಾಳ್ಪ ಮಾನವನೂ ॥ ಆಪಗಳು ಸತ್ತೀರ್ಥ ಗುರು ಮಾ- । ತಾಪಿತೃ ಪ್ರಭು ಪ್ರತಿಮ ಭೂತ ದ- । ಯಾಪರರು ಕಂಡವರಿ ದೇವರು ಯೆಂಬವನೆ ದೈತ್ಯಾ ॥ ೪ ॥

ಸುಂದರ ಸ್ವಯಂವ್ಯಕ್ತವು ಚಿದಾ- । ನಂದ ರೂಪಗಳೆಂಬುವನು ನರ- । ನಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಹ ನರನು ॥ ಕಂದುಗೊರಳ ದಿವಾಕರನು ಹರಿ- । ಯೊಂದೆ ಸೂರ್ಯ ಸುರೋತ್ತಮ ಜಗ- । ದ್ವಂದ್ಯನೆಂಬವ ವಿಷ್ಣು ದೂಷಣೆ ಮಾಡಿದವ ದೈತ್ಯಾ ॥ ೫ ॥

ನೇಮದಿಂದಶ್ವತ್ಥ ತುಲಸೀ । ಸೋಮಧರನಲಿ ವಿಮಲ ಸಾಲಿ- । ಗ್ರಾಮಗಳನಿಟ್ಟಭಿನಮಿಪ ನರ ಮುಕ್ತಿಯೋಗ್ಯ ಸದಾ ॥ ಭೂಮಿಯೊಳು ಧರ್ಮಾರ್ಥ ಮುಕ್ತಿ ಸು- । ಕಾಮಪೇಕ್ಷೆಗಳಿಂದ ಸಾಲಿ- । ಗ್ರಾಮಗಳ ವ್ಯತಿರಿಕ್ತ ವಂದಿಸೆ ದುಃಖವೈದುವನು ॥ ೬ ॥

ವಿತತಮಹಿಮನ ಬಿಟ್ಟು ಸುರರಿಗೆ । ಪೃಥಕು ವಂದನೆಯ ಮಾಳ್ಪ ಮಾನವ । ದಿತಿಜನೇ ಸರಿ ಹರಿಯು ತಾ ಸಂಸ್ಥಿತನೆನಿಸನಲ್ಲಿ ॥ ಚತುರ ಮುಖಮೊದಲಾದಖಿಳ ದೇ- । ವತೆಗಳೊಳಗಿಹನೆಂದು ಲಕ್ಷ್ಮೀ- । ಪತಿಗೆ ವಂದಿಸೆ ಒಂದರಕ್ಷಣ ಬಿಟ್ಟಗಲನವರಾ ॥ ೭ ॥

ಶೈವಶೂದ್ರಕರಾರ್ಚಿತಮಹಾ- । ದೇವ ವಾಯು ಹರಿ ಪ್ರತಿಮ ವೃಂ- । ದಾವನದಿ ಮಾಸದ್ವಯದೊಳಿಹ ತುಳಸಿಯಪ್ರಸವ ॥ ಗೋವಿವಾಹವಿವರ್ಜಿತಾಶ್ವ- । ತ್ಥಾವಿಟಪಿಗಳ ಭಕ್ತಿಪೂರ್ವಕ । ಸೇವಿಸುವ ನರ ದೈತ್ಯ ಶಾಶ್ವತದುಃಖವೈದುವನೂ ॥ ೮ ॥

ಕಮಲಸಂಭವ ಮುಖ್ಯ ಮನುಜೋ- । ತ್ತಮರ ಪರಿಯಂತರದಿ ಮುಕ್ತರು ॥ ಸಮ ಶತಾಯುಸ್ಸುಳ್ಳವನು ಕಲಿ ಬ್ರಹ್ಮನೋಪಾದಿ ॥ ಕ್ರಮದಿ ನೀಚರು ದೈತ್ಯರು ನರಾ- । ಧಮರವಿಡಿದು ಕುಲಕ್ಷ್ಮಿ ಕಲಿಯನು- । ಪಮರೆನಿಸುವವರ ಸುರರೊಳು ದ್ವೇಷಾದಿ ಗುಣದಿಂದಾ ॥ ೯ ॥

ವನಜಸಂಭವನಬ್ದಶತ ಒ- । ಬ್ಬನೆ ಮಹಾಕಲಿಶಬ್ದವಾಚ್ಯನು । ದಿನದಿನಗಳಲಿ ಬೀಳ್ವರಂಧಂತಮದಿ ಕಲಿಮಾರ್ಗಾ ॥ ದನುಜರೆಲ್ಲ ಪ್ರತೀಕ್ಷಿಸುತ ಬ್ರ- । ಹ್ಮನ ಶತಾಬ್ದಾಂತದಲಿ ಲಿಂಗವು । ಅನಿಲನ ಗದಾ ಪ್ರಹರದಿಂದಲಿ ಭಂಗವೈದುವರೂ ॥ ೧೦ ॥

ಮಾರುತನ ಗದೆಯಿಂದ ಲಿಂಗ ಶ- । ರೀರ ಪೋದಾ ನಂತರ ತಮೋ- । ದ್ವಾರವೈದಿ ಸ್ವರೂಪದುಃಖಗಳನುಭವಿಸುತಿಹರೂ ॥ ವೈರ ಹರಿಭಕ್ತರಲಿ ಹರಿಯಲಿ । ತಾರತಮ್ಯದಲಿರುತಿಹದು ಸಂ- । ಸಾರದಲ್ಲಿ ತಮಸ್ಸಿನಲಿಯತ್ಯಧಿಕ ಕಲಿಯಲ್ಲಿ ॥ ೧೧ ॥

ಜ್ಞಾನವೆಂಬುದು ಮಿಥ್ಯವಸಮಿಾ- । ಚೀನ ದುಃಖತರಂಗವೆ ಸಮಿಾ- । ಚೀನ ಬುದ್ಧಿ ನಿರಂತರದಿ ಕಲಿಗಿಹದು ದೈತ್ಯರೊಳೂ ॥ ಹೀನಳೆ ನಿಪಳು ಶತಗುಣದಿ ಕಲಿ- । ಮಾನಿನಿಗೆ ಶತ ವಿಪ್ರಚಿತ್ತಿಗೆ । ಊನ ಶತ ಗುಣ ಕಾಲನೇಮಿಯೆ ಕಂಸನೆನಿಸಿದನೂ ॥ ೧೨ ॥

ಕಾಲನೇಮಿಗೆ ಪಂಚ ಗುಣದಿಂ । ಕೀಳ ಮಧುಕೈಟಭನು ಜನ್ಮ ವ । ತಾಳಿ ಯಿಳೆಯೊಳು ಹಂಸ ಡಿಭಿಕಾಹ್ವಯದಿ ಕರೆಸಿದರೂ ॥ ಐಳ ನಾಮಕ ವಿಪ್ರಚಿತ್ತಿ ಸ- । ಮಾಳುವೆನಿಪ ಹಿರಣ್ಯಕಶ್ಯಪು । ಶೂಲಪಾ ಣಿಯ ಭಕ್ತ ನರಕಗೆ ಶತಗುಣಾಧಮನೂ ॥ ೧೩ ॥

ಗುಣಗಳತ್ರಯ ನೀಚರೆನಿಸುವ । ಕನಕಕಶಿಪುಗೆ ಹಾಟಕಾಂಬಕ- । ಗೆಣೆಯೆನಿಪ ಮಣಿಮಂತಗಿಂದಲಿ ಕಿಂಚಿದೂನ ಬಕ ॥ ದನುಜವರ ತಾರ ಕನು ವಿಂಶತಿ । ಗುಣದಿ ನೀಚನು ಲೋಕಕಂಟಕ- । ನೆನಿಪ ಶಂಬರ ತಾರಕಾಸುರಗಧಮ ಷಡ್ಗುಣದೀ ॥ ೧೪ ॥

ಸರಿಯೆನಿಸುವನು ಸಾಲ್ವನಿಗೆ ಸಂ- । ಕರನಿಗಧಮನು ದಶಗುಣದಿ ಶಂ- । ಬರಗೆ ಷಡ್ಗುಣ ನೀಚನೆನಿಪ ಹಿಡಿಂಬಕಾ ಬಾಣಾ- ॥ ಸುರನು ದ್ವಾಪರ ಕೀಚಕನು ಸಾ- । ಲ್ವರು ಸಮರು ದ್ವಾಪರನೆ ಶಕುನೀ । ಕರೆಸಿ ದನು ಕೌರವಗೆ ಸೋದರ ಮಾವನಹುದೆಂದೂ ॥ ೧೫ ॥

ನಮುಚಿ ಇಲ್ವಲ ಪಾಕನಾಮಕ । ಸಮರು ಬಾಣಾದ್ಯರಿಗೆ ದಶ ಗುಣ । ನಮುಚಿ ನೀಚನು ನೂರು ಗುಣದಿಂದಧಮ ವಾತಾಪೀ ॥ ಕುಮತಿ ಧೇನುಕ ನೂರು ಗುಣದಿಂ- । ದಮರರಿಪು ವಾತಾಪಿಗಧಮನು । ವಮನ ಧೇನುಕನಿಂದಲರ್ಧ ಗುಣಾಧಮನು ಕೇಶೀ ॥ ೧೬ ॥

ಮತ್ತೆ ಕೇಶೀನಾಮಕ ತೃಣಾ- । ವರ್ತ ಸಮ ಲವಣಾಸುರನು ಒಂ- । ಭತು ನೀಚಾರಿಷ್ಟ ನಾಮಕ ಪಂಚಗುಣದಿಂದಾ ॥ ದೈತ್ಯಸತ್ತಮ ಹಂಸ ಡಿಭಕ ಪ್ರ- । ಮತ್ತವೇನನು ಪೌಂಡ್ರಕನು ಯೆಂ । ಭತ್ತು ಗುಣ ದಿಂದಧಮ ಮೂವರು ಲವಣನಾಮಕಗೇ ॥ ೧೭ ॥

ಈಶನೇ ನಾನೆಂಬ ಖಳ ದು- । ಶ್ಶಾಸನಾ ವೃಷಸೇನ ದೈತ್ಯಾ- । ಗ್ರೇಸರ ಜರಾಸಂಧ ಸಮ ಪಾಪಿಗಳೊಳತ್ಯಧಿಕಾ ॥ ಕಂಸ ಕೂಪ ವಿಕರ್ಣ ಸರಿ ರು- । ಗ್ಮೀ ಶತಾಧಮ ರುಗ್ಮಿಗಿಂದ ಮು- । ಹಾಸುರನು ಶತಧನ್ವಿ ಕಿರ್ಮೀರರು ಶತಾಧಮರೂ ॥ ೧೮ ॥

ಮದಿರಪಾನೀ ದೈತ್ಯಗಣದೋ- । ಳಧಮರೆನಿಪರು ಕಾಲಕೇ ಯರು । ಅಧಿಕರಿಗೆ ಸಮರಹರು ದೇವಾವೇಶಬಲದಿಂದಾ ॥ ವದನ ಪಾಣೀ ಪಾದ ಶ್ರೋತ್ರಿಯ । ಗುದ ಉಪಸ್ಥ ಘ್ರಾಣತ್ವಗ್ರಸನ- । ಕಧಿಪ ದೈತ್ಯರು ನೀಚರೆನಿಪರು ಕಾಲಕೇಯರಿಗೆ ॥ ೧೯ ॥

ಜ್ಞಾನ ಕರ್ಮೇಂದ್ರಿಯಗಳಿಗೆ ಅಭಿ- । ಮಾನಿ ಕಲ್ಯಾದ್ಯಖಿಳ ದಿತಿ ಜರು । ಹೀನ ಕರ್ಮವ ಮಾಡಿ ಮಾಡಿಸುತಿಹರು ಸರ್ವರೊಳೂ ॥ ವಾಣಿ ಭಾರತಿ ಕಮಲಭವ ಪವ- । ಮಾನರಿವರಚ್ಛಿನ್ನ ಭಕ್ತರು । ಪ್ರಾಣ ಅಸುರಾವೇಶ ರಹಿತರು ಆಖಣಾಶ್ಮಸಮಾ ॥ ೨೦ ॥

ಹುತವಹಾಕ್ಷಾದ್ಯಮರರೆಲ್ಲರು । ಯುತರು ಕಲ್ಯಾವೇಶ ವಿಧಿ ಮಾ- । ರುತ ಸರಸ್ವತಿ ಭಾರತಿಯರವತಾರದೊಳಗಿಲ್ಲಾ ॥ ಕೃತ ಪುಟಾಂ ಜಲಿಯಿಂದ ತನ್ನಯ । ಪಿತನ ಸಮ್ಮುಖದಲ್ಲಿ ನಿಂದಾ- । ನತಿಸಿ ಬಿನ್ನೈಸಿ ದನು ಯೆನ್ನೊಳು ಕೃಪೆಯ ಮಾಡೆಂದೂ ॥ ೨೧ ॥

ದ್ವೇಷಿ ದೈತ್ಯರ ತಾರತಮ್ಯವು । ದೂಷಣೆಯು ಭೂಷಣಗಳೆನ್ನದೆ । ದ್ವೇಷವೆಂಬವ ದ್ವೇಷಿ ನಿಶ್ಚಯವಿವರ ನೋಡಲ್ಕೆ ॥ ಕ್ಲೇಶಗಳನೈದುವನು ಬಹುವಿಧ । ಸಂಶಯವು ಬಡಸಲ್ಲ ವೇದ- । ವ್ಯಾಸ ಗರುಡಪುರಾಣದಲಿ ಪೇಳಿದನು ಋಷಿಗಳಿಗೆ ॥ ೨೨ ॥

ಜಾಲಿ ನೆಗ್ಗಿಲು ಕ್ಷುದ್ರಶಿಲೆ ಬರಿ- । ಗಾಲ ಪುರುಷನ ಬಾಧಿಪವು ಚ- । ಮ್ಮಾಳಗಿಯ ಮೆಟ್ಟಿದವಗುಂಟೇ ಕಂಟಕಗಳ ಭಯ ॥ ಚೇಳು ಸರ್ಪವ ಕೊಂದ ವಾರ್ತೆಯು । ಕೇಳಿ ಮೋದಿಪಗಿಲ್ಲವಘ ಯಮ- । ನಾಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ ॥ ೨೩ ॥

ಪುಣ್ಯ ಕರ್ಮವ ಪುಷ್ಕರಾದಿ ಹಿ- । ರಣ್ಯ ಗರ್ಭಾಂತರ್ಗತ ಬ್ರ- । ಹ್ಮಣ್ಯದೇವನಿಗರ್ಪಿಸುತಲಿರು ಪುಣ್ಯಪಾಪಗಳಾ ॥ ಜನ್ಯ ದುಃಖವ ಕಲಿ ಮುಖಾದ್ಯರಿ- । ಗುಣ್ಣಲೀವನು ಸಕಲ ಲೋಕ ಶ- । ರಣ್ಯ ಶಾಶ್ವತ ಮಿಶ್ರಜನರಿಗೆ ಮಿಶ್ರ ಫಲವೀವಾ ॥ ೨೪ ॥

ತ್ರಿವಿಧ ಗುಣಗಳ ಮಾನಿ ಶ್ರೀಭಾ- । ರ್ಗವಿರಮಣ ಗುಣಿಗುಣಗ ಳೋಳವ- । ರವರ ಯೋಗ್ಯತೆ ಕರ್ಮಗಳನನುಸರಿಸಿ ಕರ್ಮಫಲಾ ॥ ಸ್ವವಶರಾದಮರಾಸುರರ ಗಣ- । ಕವಧಿಯಿಲ್ಲದೆ ಕೊಡುವ ದೇವ- । ಪ್ರವರ ವರ ಜಗನ್ನಾಥವಿಟ್ಠಲ ವಿಶ್ವವ್ಯಾಪಕನೂ ॥ ೨೫ ॥

ಅಂತು ಸಂಧಿ ೩೦ಕ್ಕೆ ಪದ ೯೦೭ಕ್ಕೆ ದೈತ್ಯತಾರತಮ್ಯಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೩೧. ನೈವೇದ್ಯಸಮರ್ಪಣಸಂಧಿ.

ಇದರಲ್ಲಿ ಬಹಿಃಸ್ಥಿತ ಪ್ರತಿಮಾ ಸಾಲಿಗ್ರಾಮ ಗತ ಭಗವದ್ರೂಪಕ್ಕೆ ಪಾಕ ಮಾಡಿದ ಪದಾರ್ಥಗಳನ್ನು ನಿವೇದನ ಮಾಡತಕ್ಕ ಕ್ರಮವನ್ನು ಹೇಳುತ್ತಾರೆ.

॥ ಶ್ರೀಮಧ್ವೇಶಾಯ ನಮಃ ॥

ರಾಗ ಶಂಕರಾಭರಣ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಲಕ್ಕಿಸದೆ ಲಕುಮಿಯನು ಬೊಮ್ಮನ । ಪೊಕ್ಕುಳಿಂದಲಿ ಪಡೆದ
ಪೊಸ ಪೊಂ- । ಬಕ್ಕಿದೇರನು ಪಡದವಯವಗಳಿಂದ ದಿವಿಜರನು ॥
ಮಕ್ಕಳಂದದಿ ಪೊರೆವ ಸರ್ವದ । ರಕ್ಕಸಾಂತಕ ರಣದೊಳಗೆ ನಿ- ।
ದುರ್ಃಖ ಸುಖಮಯ ಕಾಯ್ದ ಪಾರ್ಥನ ಸೂತನೆಂದೆನಿಸಿ ॥ ೧ ॥

ದೋಷಗಂಧವಿದೂರ ನಾನಾ- । ವೇಷಧಾರಿ ವಿಚಿತ್ರಕರ್ಮ ಮ- ।
ನೀಷ ಮಾಯಾರಮಣ ಮಧ್ವಾಂತಃಕರಣರೂಢಾ ॥ ಶೇಷಶಾಯಿ
ಶರಣ್ಯ ಕೌಸ್ತುಭ- । ಭೂಷಣ ಸುಕಂಧರ ಸದಾ ಸಂ- । ತೋಷಬಲ
ಸೌಂದರ್ಯಸಾರನ ಮಹಿಮೆಗೇನೆಂಬೆ ॥ ೨ ॥

ಸಾಶನಾನಶನೇ ಅಭೀ ಯೆಂ- । ಬೀ ಶ್ರುತಿಪ್ರತಿಪಾದ್ಯನೆನಿಸುವ ।
ಕೇಶವ ರೂಪದ್ವಯವ ಚಿದ್ದೇಹದೊಳು ಹೊರಗೆ ॥ ಬೇಸರದೆ ಸದ್ಭಕ್ತಿ
ಯಿಂದ ಮು- । ಪಾಸನೆಯ ಗೈಯುತ್ತ ಬುಧರು ಹು- । ತಾಶನನ ಪೋಲಿಪ್ಪ
ನೆಂದನವರತ ನುತಿಸುತಿರು ॥ ೩ ॥

ಸಕಲಸದ್ಗುಣಪೂರ್ಣ ಜನ್ಮಾ- । ದ್ಯಖಿಳದೋಷವಿದೂರ ಪ್ರಕ
ಟಾ- । ಪ್ರಕಟ ಸದ್ವ್ಯಾಪಾರಿ ಗತಸಂಸಾರಿ ಕಂಸಾರೀ ॥ ನಕುಲ ನಾನಾ
ರೂಪ ನೀಯಾ- । ಮಕ ನಿಯಮ್ಯ ನಿರಾಮಯ ರವಿ- । ಪ್ರಕರ ಸನ್ನಿಭ
ಪ್ರಭು ಸದಾ ಮಾಂ ಪಾಹಿ ಪರಮಾಪ್ತ ॥ ೪ ॥

ಚೇತನಾಚೇತನಜಗತ್ತಿನೊ- । ಳಾತತನು ತಾನಾಗಿ ಲಕ್ಷ್ಮೀ- । ನಾಥ ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸೀ ॥ ಜಾತಿಕಾರನ ತೆರದಿ ಯೆಲ್ಲರ । ಮಾತಿನೊಳಗಿದ್ದಖಿಳ ಕರ್ಮವ । ತಾ ತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತಿಪ್ಪಾ ॥ ೫ ॥

ವೀತಭಯ ವಿಜ್ಞಾನದಾಯಕ । ಭೂತಭವ್ಯಭವತ್ಪ್ರಭು ಖಳಾ- । ರಾತಿ ಖಗವರವಹನ ಕಮಲಾಕಾಂತ ನಿಶ್ಚಿಂತಾ ॥ ಮಾತರಿಶ್ವಪ್ರಿಯ ಪುರಾತನ । ಪೂತನಾಪ್ರಾಣಾಪಹಾರಿ ವಿ- । ಧಾತೃಜನಕ ವಿಪಶ್ಚಿತರ ಪ್ರಿಯ ಸಲಹು ಸಲಹೆಮ್ಮ ॥ ೬ ॥

ದುಷ್ಟಜನಸಂಹಾರಿ ಸರ್ವೋ- । ತ್ಕೃಷ್ಟಮಹಿಮ ಸಮೀರನುತ ಸಕ- । ಲೇಷ್ಟದಾಯಕ ಸ್ವರತ ಸುಖಮಯ ಮಮ ಕುಲಸ್ವಾಮೀ ॥ ಹೃಷ್ಟಪುಷ್ಟ ಕನಿಷ್ಟ ಸೃಷ್ಟ್ಯಾ- । ದ್ಯಷ್ಟಕರ್ತೃ ಕರೀಂದ್ರವರದ ಯ- । ಥೇಷ್ಟದನು ವುನ್ನತ ಸುಕರ್ಮಾನಮಿಪೆನನವರತಾ ॥ ೭ ॥

ಪಾಕಶಾಸನಪೂಜ್ಯಚರಣ ಪಿ- । ನಾಕಿಸನ್ನುತಮಹಿಮ ಸೀತಾ- । ಶೋಕನಾಶನ ಸುಲಭ ಸುಮುಖ ಸುವರ್ಣವರ್ಣನಿಭಾ ॥ ಮಾಕಳತ್ರ ಮನೀಷಿ ಮಧುರಿಪು । ಏಕಮೇವಾದ್ವಿತಿಯರೂಪ ಪ್ರ- । ತೀಕ ದೇವ ಗಣಾಂತರಾತ್ಮಕ ಪಾಲಿಸುವದೆಮ್ಮಾ ॥ ೮ ॥

ಅಪ್ರಮೇಯಾನಂತರೂಪ ಸ- । ದಾ ಪ್ರಸನ್ನಮುಖಾಬ್ಜ ಮುಕ್ತಿ ಸು- । ಖಪ್ರದಾಯಕ ಸುಮನಸಾರಾಧಿತಪದಾಂಭೋಜಾ ॥ ಸ್ವಪ್ರಕಾಶ ಸ್ವತಂತ್ರ ಸರ್ವಗ । ಕ್ಷಿಪ್ರಫಲದಾಯಕ ಕ್ಷಿತೀಶ ಯ- । ದುಪ್ರವೀರ ವಿಕರ್ತ ವಿಶ್ವಸುತೈಜಸ ಪ್ರಾಜ್ಞ ॥ ೯ ॥

ಗಾಳಿನಡೆವಂದದಲಿ ನೀಲಘ- । ನಾಳಿವರ್ತಿಸುವಂತೆ ಬ್ರಹ್ಮತ್ರಿ- । ಶೂಲಧರ ಶಕ್ರಾರ್ಕ ಮೊದಲಾದಖಿಳ ದೇವಗಣಾ ॥ ಕಾಲಕರ್ಮ ಗುಣಾಭಿಮಾನಿ ಮ- । ಹಾಲಕುಮಿಯನುಸರಿಸಿ ನಡೆವಳು । ಮೂಲ ಕಾರಣ ಮುಕ್ತಿದಾಯಕ ಹರಿಯೆನಿಸಿಕೊಂಬ ॥ ೧೦ ॥

ಮೋಡ ಕೈಬೀಸಣಿಗೆಯಿಂದಲಿ। ಓಡಿಸುವೆನೆಂಬುವನ ಯತ್ನವು। ಕೂಡುವದೆ ಕಲ್ಪಾಂತಕಾದರು ಲಕ್ಷ್ಮಿವಲ್ಲಭನು ॥ ಜೋಡು ಕರ್ಮವ ಜೀವರೊಳು ತಾ । ಮಾಡಿ ಮಾಡಿಸಿ ಫಲಗಳುಣಿಸುವ। ಪ್ರೌಢರಾದ ವರಿವನ ಭಜಿಸಿ ಭವಾಬ್ಧಿ ದಾಟುವರು ॥ ೧೧ ॥

ಕ್ಲೇಶಮೋಹಾಜ್ಞಾನದೋಷ ವಿ- । ನಾಶಕ ವಿರಿಂಚಾಂಡದೊಳಗಾ-। ಕಾಶದೋಪಾದಿಯಲಿ ತುಂಬಿಹನೆಲ್ಲಕಾಲದಲಿ ॥ ಘಾಸಿಗೊಳಿಸದೆ ತನ್ನವರನಾ- ॥ ಯಾಸವಿಲ್ಲದೆ ಸಲಹುತಿರೆ ಕರು- । ಣಾಸಮುದ್ರ ಪ್ರಸನ್ನವದನಾಂಭೋಜ ವೈರಾಜಾ ॥ ೧೨ ॥

ಕನ್ನಡಿಯ ಕೈಪಿಡಿದು ನೋಳ್ಪನ । ಕಣ್ಣುಗಳು ಕಂಡಲ್ಲಿ ಯೆರಗದೆ। ತನ್ನ ಪ್ರತಿಬಿಂಬವನೆ ಕಾಣಿಪ ದರ್ಪಣವ ಬಿಟ್ಟು॥ ಧನ್ಯರಿಳೆಯೊಳಗೆಲ್ಲ ಕಡೆಯಲಿ। ನಿನ್ನ ರೂಪವ ನೋಡಿ ಸುಖಿಸುತ। ಸನ್ನುತಿಸುತಾನಂದ ವಾರಿಧಿಯೊಳಗೆ ಮುಳುಗಿಹರೂ ॥ ೧೩ ॥

ಅನ್ನಮಾನಿ ಶಶಾಂಕನೊಳು ಕಾ-। ರುಣ್ಯಸಾಗರ ಕೇಶವನು ಪರ-। ಮಾನ್ನದೊಳು ಭಾರತಿಯು ನಾರಾಯಣನು ಭಕ್ಷ್ಯದೊಳು ॥ ಸೊನ್ನಗದಿರನು ಮಾಧವನು ಶ್ರುತಿ-। ಸನ್ನುತ ಶ್ರೀಲಕ್ಷ್ಮಿಘೃತದೊಳು । ಮಾನ್ಯ ಗೋವಿಂದಾಭಿಧನು ಯಿರುತಿಪ್ಪನೆಂದೆಂದು ॥ ೧೪ ॥

ಕ್ಷೀರಮಾನಿ ಸರಸ್ವತೀ ಜಗ-। ತ್ಸಾರವಿಷ್ಣುವ ಚಿಂತಿಸುವದು ಸ-। ರೋರುಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರಿ ॥ ಮಾರುತನು ನವನೀತದೊಳು ಸಂ- । ಪ್ರೇರಕ ತ್ರಿವಿಕ್ರಮನು ದಧಿಯೊಳು । ವಾರಿನಿಧಿ ಚಂದ್ರಮರೊಳಗೆ ಇರುತಿಪ್ಪ ವಾಮನನು ॥ ೧೫ ॥

ಗರುಡ ಸೂಪಕೆ ಮಾನಿ ಶ್ರೀ ಶ್ರೀ-। ಧರನು ದೇವನು ಪತ್ರಶಾಕಕೆ। ವರನೆನಿಪ ಮಿತ್ರಾಖ್ಯ ಸೂರ್ಯಹೃಷೀಕಪನ ಮೂರ್ತಿ॥ ಉರಗರಾಜನು ಫಲಸುಶಾಕಕೆ। ವರನೆನಿಸುವನು ಪದ್ಮನಾಭನ । ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲಕಾಲದಲಿ ॥ ೧೬ ॥

ಗೌರಿ ಸರ್ವಾಮ್ಲಸ್ಥಳೆನಿಸಳು । ಶೌರಿದಾಮೋದರನ ತಿಳಿವುದು । ಗೌರಿಪಾನಾಮ್ಲಸ್ಥ ಸಂಕರುಷಣನ ಚಿಂತಿಪುದು ॥ ಸಾರಶರ್ಕರಗುಡದೊಳಗೆ ವೃ- । ತ್ರಾರಿಯಿರುತಿಹ ವಾಸುದೇವನ । ಸೂರಿಗಳು ಧೇನಿಸರು ಪರಮಾದರದಿ ಸರ್ವತ್ರ ॥ ೧೭ ॥

ಸ್ಮರಿಸು ವಾಚಸ್ಪತಿಯು ಸೋಪ- । ಸ್ಕರದೊಳಗೆ ಪ್ರದ್ಯುಮ್ನನಿಪ್ಪನು । ನಿರಯಪತಿ ಯಮಧರ್ಮ ಕುಟುದ್ರವ್ಯದೊಳಗನಿರುದ್ಧಾ ॥ ಸರಸಪ ಶ್ರೀರಾಮಶೇಲದಿ । ಸ್ಮರನ ಶ್ರೀಪುರುಷೋತ್ತಮನ ಕ- । ರ್ಪುರದಿ ಚಿಂತಿಸಿ ಪೂಜಿಸುತಲಿರು ಪರಮಭಕುತಿಯಲಿ ॥ ೧೮ ॥

ನಾಲಿಗೆಯೊಳು ಸ್ವೀಕರಿಪ ರಸ । ಪಾಲು ಮೊದಲಾದರೊಳಗೇ ಘೃತ । ತೈಲ ಪಕ್ವಪದಾರ್ಥದೊಳಗಿಹ ಚಂದ್ರನಂದನನಾ ॥ ಪಾಲಿಸುವ ಧೋಕ್ಷಜನ ಚಿಂತಿಸು । ಸ್ಥೂಲಕೂಷ್ಮಾಂಡ ತಿಲಮಾಷಜ । ಈ ಲಲಿತಭಕ್ಷದಲಿ ದಕ್ಷನು ಲಕ್ಷ್ಮಿನರಸಿಂಹಾ ॥ ೧೯ ॥

ಮನುವು ಮಾಷಸುಭಕ್ಷದೊಳು ಚಿಂ- । ತನೆಯಮಾಡಚ್ಯುತನ ನಿರಖುತಿ । ಮನೆಯೆನಿಪ ಲವಣದೊಳು ಮರೆಯದೆ ಶ್ರೀಜನಾರ್ದನನಾ ॥ ನೆನೆವುತಿರು ಫಲರಸಗಳೊಳು ಪ್ರಾ- । ಣನನುಪೇಂದ್ರನ ವೀಳ್ಯದೆಲೆಯೊಳು। ದ್ಯುನದಿ ಹರಿರೂಪವನೆ ಕೊಂಡಾಡುತಲೆ ಸುಖಿಸುತಿರು॥ ೨೦ ॥

ವೇದವಿನುತಗೆ ಬುಧನು ಸುಸ್ವಾ- । ದೂದಕಾಧಿಪನೆನಿಸಿಕೊಂಬನು । ಶ್ರೀದಕೃಷ್ಣನ ತಿಳಿದು ಪೂಜಿಸುತಿರು ನಿರಂತರದೀ ॥ ಸಾಧುಕರ್ಮವ ಪುಷ್ಕರನು ಸುನಿ- । ವೇದಿತ ಪದಾರ್ಥಗಳ ಶುದ್ಧಿಯ । ಗೈದು ಗೈಸುತ ಹಂಸ ನಾಮಕಗರ್ಪಿಸುತಲಿಪ್ಪಾ ॥ ೨೧ ॥

ರತಿ ಸಕಲಸುಸ್ವಾದುರಸಗಳ । ಪತಿಯೆನಿಸುವಳು ಅಲ್ಲಿ ವಿಶ್ವನು । ಹುತವಹನ ಚುಲ್ಲಿಗಳೊಳಗೆ ಭಾರ್ಗವನ ಚಿಂತಿಪುದೂ ॥ ಕ್ಷಿತಿಜ ಗೋಮಯಜಾದಿಯೊಳು ಸಂ- । ಸ್ಥಿತ ವಸಂತನ ಋಷಭದೇವನ । ತುತಿಸುತಿರು ಸಂತತ ಸದಾ ಸದ್ಭಕ್ತಿಪೂರ್ವಕದಿ ॥ ೨೨ ॥

ಪಾಕಕರ್ತೃಗಳೊಳು ಚತುರ್ದಶ। ಲೋಕಮಾತೆ ಮಹಾಲಕುಮಿ ಗತ-। ಶೋಕ ವಿಶ್ವಂಭರನ ತಿಳಿವುದು ಯೆಲ್ಲಕಾಲದಲಿ ॥ ಚೌಕಶುದ್ಧ ಸುಮಂಡಲದಿ ಭೂ-। ಸೂಕರಾಹ್ವಯ ವುಪರಿಚೈಲಪ-। ನೇಕದಂತ ಸನತ್ಕುಮಾರನ ಧ್ಯಾನಿಪುದು ಬುಧರೂ ॥ ೨೩ ॥

ಶ್ರೀನಿವಾಸನ ಭೋಗ್ಯವಸ್ತುವ। ಕಾಣಗೊಡದಂದದಲಿ ವಿಷ್ವ-। ಕ್ಸೇನ ಪರಿಖಾರೂಪನಾಗಿಹನಲ್ಲಿ ಪುರುಷಾಖ್ಯಾ ॥ ತಾನೆ ಪೂಜಕ ಪೂಜ್ಯನೆನಿಸಿ ನಿ-। ಜಾನುಗರ ಸಂತೈಪ ಗುರುಪವ-। ಮಾನವಂದಿತ ಸರ್ವಕಾಲಗಳಲ್ಲಿ ಸರ್ವೇಶಾ ॥ ೨೪ ॥

ನೂತನ ಸವಿಾಚೀನ ಸುರಸೋ-। ಪೇತ ಹೃದ್ಯಪದಾರ್ಥದೊಳು ವಿಧಿ-। ಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ ॥ ಪ್ರೀತಿಬಡಿಸುತ ನಿತ್ಯದಿ ಜಗ-। ನ್ನಾಥನಿರಲನ ಕೂಡಿ ತಾ ನಿ-। ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ॥ ೨೫ ॥

ಅಂತು ಸಂಧಿ ೩೧ಕ್ಕೆ ಪದ ೯೩೨ಕ್ಕೆ ನೈವೇದ್ಯಪ್ರಕರಣಸಂಧಿ ಸಮಾಪ್ತ.

ಶ್ರೀಕೃಷ್ಣಾರ್ಪಣಮಸ್ತು.



# ೩೨. ದೇವತಾತಾರತಮ್ಯಸಂಧಿ.

## (ಕಕ್ಷಾತಾರತಮ್ಯಸಂಧಿ.)

ಶ್ರೀಮಜ್ಜಗನ್ನಾಥರಾಯರು ತಾರತಮ್ಯಾನುಸಾರವಾಗಿ ಶ್ರೀಪರಮಾತ್ಮನನ್ನೂ ದೇವತೆಗಳನ್ನೂ ಪ್ರಾರ್ಥನಾ ಮಾಡಿ ಗ್ರಂಥಸಮಾಪ್ತಿ ಮಾಡುತ್ತಾರೆ

॥ ಜಗಜ್ಜನ್ಮಾದಿಕರ್ತ್ರೇ ನಮಃ ॥

ರಾಗ ತೋಡಿ, ರೂಪಕತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀರಮಣ ಸರ್ವೇಶ ಸರ್ವಗ । ಸಾರಭೋಕ್ತ ಸ್ವತಂತ್ರ ದೋಷವಿ- । ದೂರ ಜ್ಞಾನಾನಂದಬಲವೈಶ್ವರ್ಯಗುಣಪೂರ್ಣಾ ॥ ಮೂರು ಗುಣವರ್ಜಿತ ಸಗುಣ ಸಾ- । ಕಾರ ವಿಶ್ವಸ್ಥಿತಿಲಯೋದಯ- । ಕಾರಣ ಕೃಪಾಸಾಂದ್ರ ನರಹರೆ ಸಲಹೊ ಸಜ್ಜನರಾ ॥ ೧ ॥

ನಿತ್ಯಮುಕ್ತಳೆ ನಿರ್ವಿಕಾರಳೆ । ನಿತ್ಯಸುಖಸಂಪೂರ್ಣೆ ನಿತ್ಯಾ- । ನಿತ್ಯಜಗದಾಧಾರೆ ಮುಕ್ತಾಮುಕ್ತಗಣವಿನುತೆ ॥ ಚಿತ್ತಯಿಸು ಬಿನ್ನಪವ ಶ್ರೀಪುರು- । ಷೋತ್ತಮನ ವಕ್ಷೋನಿವಾಸಿನಿ । ಭೃತ್ಯವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ॥ ೨ ॥

ರೋಮಕೂಪಗಳೊಳು ಪೃಥಕ್ಪೃಥ- । ಗಾ ಮಹಾಪುರುಷನ ಸುಮೂರ್ತಿಯ । ತಾಮರಸಜಾಂಡಗಳ ತದ್ಗತವಿಶ್ವರೂಪಗಳ ॥ ಶ್ರೀಮಹಿಳೆ ರೂಪಗಳ ಗುಣಗಳ । ಸೀಮೆಗಾಣದೆ ಯೋಚಿಸುತ ಮಮ । ಸ್ವಾಮಿ ಮಹಿಮೆಯದೆಂತುಟೆಂದಡಿಗಡಿಗೆ ಬೆರಗಾದ ॥ ೩ ॥

ಒಂದಜಾಂಡದೊಳೊಂದು ರೂಪದೊ- । ಳೊಂದವಯವದೊಳೊಂದು ನಖದೊಳ- । ಗೊಂದು ಗುಣಗಳ ಪಾರಗಾಣದೆ ಕೃತಪುಟಾಂಜಲಿಯೂ ॥ ಮಂದಜಾಸನ ಪುಳಕಪುಳಕಾ- । ನಂದಬಾಷ್ಪ ತೊದಲ್ನುಡಿಗಳಿಂ- । ದಿಂದಿರಾವಲ್ಲಭನ ಮಹಿಮೆ ಗಭೀರತರವೆಂದಾ ॥ ೪ ॥

ಏನು ಧನ್ಯರೊ ಬ್ರಹ್ಮ ಗುರುಪವ- । ಮಾನರೀರ್ವರು ಯಿಾ ಪರಿಯಲಿ ರ- । ಮಾನಿವಾಸನ ವಿಮಲಲಾವಣ್ಯಾತಿಶಯಗಳನೂ ॥ ಸಾನುರಾಗದಿ ನೋಡಿ ಸುಖಿಪ ಮ- । ಹಾನುಭಾವರ ಭಾಗ್ಯವೆಂತೊ ಭ- । ವಾನಿಧವನಿಗಸಾಧ್ಯವೆನಿಸಲು ನರರ ಪಾಡೇನೂ ॥ ೫ ॥

ಆ ಪಿತಾಮಹ ನೂರು ಕಲ್ಪ ರ- । ಮಾಪತಿಯ ಗುಣ ಜಪಿಸಿ ಒಲಿಸಿ ಮ- । ಹಾಪರಾಕ್ರಮ ಹನುಮ ಭೀಮಾನಂದಮುನಿಯೆನಿಸಿ ॥ ಆ ಪರಬ್ರಹ್ಮನ ಸುನಾಭೀ- । ಕೂಪಸಂಭವ ನಾಮದಲಿ ಮೆರೆ- । ವಾ ಪಯೋಜಾಸನ ಸಮಿಾರರಿಗಭಿನಮಿಪೆ ಸತತಾ ॥ ೬ ॥

ವಾಸುದೇವನ ಮೂರ್ತಿ ಹೃದಯಾ- । ಕಾಶಮಂಡಲಮಧ್ಯದಲಿ ತಾ- । ರೇಶನಂದದಿ ಕಾಣುತತಿಸಂತೋಷದಲಿ ತುತಿಪಾ ॥ ಆ ಸರಸ್ವತಿ ಭಾರತಿಯರಿಗೆ । ನಾ ಸತತ ವಂದಿಸುವೆ ಪರಮೋ- । ಲ್ಲಾಸದಲಿ ಸುಜ್ಞಾನ ಭಕುತಿಯ ಸಲಿಸಲೆಮಗೆಂದು ॥ ೭ ॥

ಜಗದುದರನ ಸುರೋತ್ತಮನ ನಿಜ- । ಪೆಗಲೊಳಾಂತು ಕರಾಬ್ಜದೊಳ್ಪದ- । ಯುಗ ಧರಿಸಿ ನಖಪಜ್ತ್ತಿಯೊಳು ರಮಣೀಯತರವಾದ ॥ ನಗಧರನ ಪ್ರತಿಬಿಂಬ ಕಾಣುತ । ಮಿಗೆ ಹರುಷದಿಂ ಪೊಗಳಿ ಹಿಗ್ಗುವ । ಖಗಕುಲಾಧಿಪ ಕೊಡಲಿ ಮಂಗಳ ಸಕಲಸುಜನರಿಗೆ ॥ ೮ ॥

ಯೋಗಿಗಳ ಹೃದಯಕೆ ನಿಲುಕ ನಿಗ- । ಮಾಗಮೈಕವಿನುತನ ಪರಮನು- । ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ ॥ ಭೂಗಗನ ಪಾತಾಳ ವ್ಯಾಪ್ತನ । ಯೋಗನಿದ್ರಾಸ್ಪದನೆನಿಪ ಗುರು- । ನಾಗರಾಜನ ಪದಕೆ ನಮಿಸುವೆ ಮನದೊಳನವರತಾ ॥ ೯ ॥

ನಂದಿವಾಹನ ನಳಿನಿಧರ ಮೌ- । ಳೀಂದುಶೇಖರ ಶಿವ ತ್ರಿಯಂಬಕ । ಅಂಧಕಾಸುರಮಥನ ಗಜಶಾರ್ದೂಲಚರ್ಮಧರಾ ॥ ಮಂದಜಾಸನತನಯ ತ್ರಿಜಗ- । ದ್ವಂದ್ಯ ಶುದ್ಧಸ್ಫಟಿಕಸನ್ನಿಭ । ವಂದಿಸುವೆನನವರತ ಪಾಲಿಸೊ ಪಾರ್ವತೀರಮಣಾ ॥ ೧೦ ॥

ಫಣಿಫಣಾಂಚಿತಮುಕುಟರಂಜಿತ । ಕ್ವಣಿತಡಮರು ತ್ರಿಶೂಲ ಶಿಖಿದಿನ- । ಮಣಿನಿಶಾಕರನೇತ್ರ ಪರಮಪವಿತ್ರ ಸುಚರಿತ್ರಾ ॥ ಪ್ರಣತಕಾಮದ ಪ್ರಮಥಸುರಮುನಿ । ಗಣಸುಪೂಜಿತಚರಣಯುಗ ರಾ- । ವಣಮದವಿಭಂಜನ ಸತತ ಮಾಂ ಪಾಹಿ ಮಹದೇವಾ ॥ ೧೧ ॥

ದಕ್ಷಯಜ್ಞವಿಭಂಜನನೆ ವಿರು- । ಪಾಕ್ಷ ವೈರಾಗ್ಯಾಧಿಪತಿ ಸಂ- । ರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು ॥ ಯಕ್ಷಪತಿಸಖ ಯಜಪರಿಗೆ ಸುರ- । ವೃಕ್ಷ ವೃಕದನುಜಾರಿ ಲೋಕಾ- । ಧ್ಯಕ್ಷ ಶುಕದೂರ್ವಾಸಜೈಗೀಷವ್ಯ ಸಂತೈಸೂ ॥ ೧೨ ॥

ಹತ್ತು ಕಲ್ಪದಿ ಲವಣಜಲಧಿಯೊ- । ಳುತ್ತಮಶ್ಲೋಕನ ವಲಿಸಿ ಕೃತ- । ಕೃತ್ಯನಾಗಿ ಜಗತ್ಪತಿಯ ನೇಮದಿ ಕುಶಾಸ್ತ್ರಗಳಾ ॥ ಬಿತ್ತರಿಸಿ ಮೋಹಿಸಿ ದುರಾತ್ಮರ । ನಿತ್ಯನಿರಯನಿವಾಸರೆನಿಸಿದ । ಕೃತ್ತಿವಾಸಗೆ ನಮಿಪೆ ಶೇಷಪದಾರ್ಹನಹುದೆಂದು ॥ ೧೩ ॥

ಕಂಬುಪಾಣಿಯ ಪರಮಪ್ರೇಮನಿ- । ತಂಬಿನಿಯರೆಂದೆನಿಪ ಲಕ್ಷಣ । ಜಾಂಬವತಿ ಕಾಳಿಂದಿ ನೀಲಾ ಭದ್ರ ಸಖವಿಂದಾ ॥ ಎಂಬ ಷಣ್ಮಹಿಷಿಯರ ದಿವ್ಯ ಪ- । ದಾಂಬುಜಗಳಿಗೆ ನಮಿಪೆ ಮಮ ಹೃದ- । ಯಾಂಬರದಿ ನೆಲಸಲಿ ಬಿಡದೆ ತಮ್ಮರಸನೊಡಗೂಡಿ ॥ ೧೪ ॥

ಆ ಪರಂತಪನೊಲುಮೆಯಿಂದ ಸ- । ದಾಪರೋಕ್ಷಿಗಳೆನಿಸಿ ಭಗವ- । ದ್ರೂಪಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವಾ ॥ ಸೌಪರಣಿ ವಾರುಣಿ ನಗಾತ್ಮಜ- । ರಾಪನಿತು ಬಣ್ಣಿಸುವೆ ಯೆನ್ನ ಮ- । ಹಾಪರಾಧಗಳೆಣಿಸದೀಯಲಿ ಪರಮಮಂಗಳವಾ ॥ ೧೫ ॥

ತ್ರಿದಿವತರು ಮಣಿ ಧೇನುಗಳಿಗಾ- । ಸ್ಪದವೆನಿಪ ತ್ರಿದಶಾಲಯಾಬ್ಧಿಗೆ । ಬದರನಂದದಲೊಪ್ಪುತಿಪ್ಪ ವುಪೇಂದ್ರಚಂದ್ರಮನಾ ॥ ಮೃದು ಮಧುರ ಸುಸ್ತವನದಿಂದಲಿ । ಮಧುಸಮಯ ಪಿಕನಂತೆ ಪಾಡುವ । ಮುದಿರವಾಹನನಂಘ್ರಿಯುಗ್ಮಂಗಳಿಗೆ ನಮಿಸುವೆನು ॥ ೧೬ ॥

ಕೃತಿರಮಣ ಪ್ರದ್ಯುಮ್ನ ದೇವನ । ಅತುಳಬಲಲಾವಣ್ಯ ಗುಣಸಂ- । ತತವುಪಾಸನಕೇತುವಾಲಾಖಂಡದೊಳು ರಚಿಪಾ ॥ ರತಿಮನೋಹರನಂಘ್ರಿಕಮಲಕೆ । ನುತಿಸುವೆನು ಭಕುತಿಯಲಿ ಮಮ ದು- । ರ್ಮತಿಯ ಕಳೆದು ಸನ್ಮತಿಯನೀಯಲಜಸ್ರ ನಮಗೊಲಿದು ॥ ೧೭ ॥

ಚಾರುತರ ನವವಿಧ ಭಕುತಿ ಗಂ- । ಭೀರವಾರಾಶಿಯೊಳು ಪರಮೋ- । ದಾರಮಹಿಮನ ಹೃದಯ ಫಣಿಪತಿ ಪೀಠದೊಳು ಭಜಿಪಾ ॥ ಭೂರಿ ಕರ್ಮಾಕರನೆನಿಸುವ ಶ- । ರೀರಮಾನಿ ಪ್ರಾಣಪತಿ ಪದ- । ವಾರಿರುಹಕಾನಮಿಪೆ ಮದ್ಗುರುರಾಯನಹುದೆಂದು ॥ ೧೮ ॥

ವಿತತಮಹಿಮನ ವಿಶ್ವತೋಮುಖ- । ನತುಳಭುಜಬಲಕಲ್ಪತರುವಾ- । ಶ್ರಿತರೆನಿಸಿ ಸಕಲೇಷ್ಟ ಪಡೆದನುದಿನದಿ ಮೋದಿಸುವ ॥ ರತಿ ಸ್ವಯಂಭುವ ದಕ್ಷ ವಾಚ- । ಸ್ಪತಿ ಬಿಡೌಜನ ಮಡದಿ ಶಚಿ ಮ- । ನ್ಮಥ ಕುಮಾರನಿರುದ್ಧರೆಮಗೀಯಲಿ ಸುಮಂಗಳವಾ ॥ ೧೯ ॥

ಭವವನಧಿನವಪೋತ ಪುಣ್ಯ- । ಶ್ರವಣಕೀರ್ತನಪಾದವನರುಹ । ಭವನನಾವಿಕನಾಗಿ ಭಜಕರ ತಾರಿಸುವ ಬಿಡದೇ ॥ ಪ್ರವಹಮಾರುತ ದೇವ ಪರಮೋ- । ತ್ಸವವಿಶೇಷನಿರಂತರ ಮಹಾ- । ಪ್ರವಹದಂದದಿ ಕೊಡಲಿ ಭಗವದ್ಭಕ್ತಸಂತತಿಗೆ ॥ ೨೦ ॥

ಜನರನುದ್ಧರಿಸುವೆನೆನುತ ನಿಜ । ಜನಕನನುಮತದಲಿ ಸ್ವಯಂಭುವ- । ಮನುವಿನಿಂದಲಿ ಪಡದೆ ಸುಕುಮಾರಕರನೊಲುಮೆಯಲಿ ॥ ಜನನಿ ಶತರೂಪಾ ನಿತಂಬಿನಿ । ಮನವಚನ ಕಾಯದಲಿ ಬಿಡದನು- । ದಿನ ನಮಿಸುವೆನು ಕೊಡು ಯೆಮಗೆ ಸನ್ಮಂಗಳವನೊಲಿದು ॥ ೨೧ ॥

ನರನ ನಾರಾಯಣನ ಹರಿ ಕೃ- । ಷ್ಣರ ಪಡದೆ ಪುರುಷಾರ್ಥ ತೆರದಲಿ । ತರಣಿ ಶಶಿ ಶತರೂಪರಿಗೆ ಸಮನೆನಿಸಿ ಪಾಪಿಗಳಾ ॥ ನಿರಯದೊಳು ನೆಲೆಗೊಳಿಸಿ ಸಜ್ಜನ । ನೆರವಿಯನು ಪಾಲಿಸುವ ಔದುಂ- । ಬರು ಸಲಹು ಸಲಹೆಮ್ಮ ಬಿಡದಲೆ ಪರಮ ಕರುಣದಲಿ ॥ ೨೨ ॥

ಮಧುವಿರೋಧಿ ಮನೋಜ ಕ್ಷೀರೋ- । ದಧಿಮಥನಸಮಯದಲುದಿಸಿ ನೆರೆ । ಕುಧರಜಾವಲ್ಲಭನ ಮಸ್ತಕಮಂದಿರದಿ ಮೆರೆವಾ ॥ ವಿಧುತವಾಂಘ್ರಿಪಯೋಜಯುಗಳಕೆ । ಮಧುಪನಂದದಲೆರಗಲೆನ್ನನ- । ದಧಿಪ ವಂದಿಪೆನನುದಿನಂತಸ್ತಾಪ ಪರಿಹರಿಸು ॥ ೨೩ ॥

ಶ್ರೀವನರುಹಾಂಬಕನ ನೇತ್ರಗ- । ಳೀವೆ ಮನೆನಿಸಿ ಸಜ್ಜನರಿಗೆ ಕ- । ರಾವಲಂಬನವೀವ ತೆರದಿ ಮಯೂಖ ವಿಸ್ತರಿಪಾ ॥ ಆ ವಿವಸ್ವಾನೆಂದೆನಿಸುವ ವಿ- । ಭಾವಸುವಹರ್ನಿಶಿಗಳಲಿ ಕೊಡ- । ಲೀವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನಾ ॥ ೨೪ ॥

ಲೋಕವಮಾತೆಯ ಪಡೆದು ನೀ ಜಗ- । ದೇಕಪಾತ್ರನಿಗಿತ್ತಕಾರಣ । ಶ್ರೀಕುಮಾರಿ ಸಮೇತ ನೆಲಸಿದ ನಿನ್ನ ಮಂದಿರದೀ ॥ ಆ ಕಮಲಭವಮುಖರು ಬಿಡದೆ ಪ- । ರಾಕೆನುತ ನಿಂದಿಹರೊ ಗುಣರ- । ತ್ನಾಕರನೆ ಬಣ್ಣಿಸಲಳವೆ ಕೊಡು ಯೆಮಗೆ ಸನ್ಮನವಾ ॥ ೨೫ ॥

ಫಣೆಯೊಳೊಪ್ಪುವ ತಿಲಕ ತುಲಸೀ- । ಮಣಿಗಣಾಂಚಿತಕಂಠ ಕರದಲಿ । ಕ್ವಣಿತ ವೀಣಾಸುಸ್ವರದಿ ಬಹುತಾಳಗತಿಗಳಲಿ ॥ ಪ್ರಣವಪ್ರತಿಪಾದ್ಯನ ಗುಣಂಗಳ । ಕುಣಿದು ಪಾಡುತ ಪರಮ ಸುಖಸಂ- । ದಣಿಯೊಳಾಡುವ ದೇವಋಷಿ ನಾರದರಿಗಭಿನಮಿಪೆ ॥ ೨೬ ॥

ಆ ಸರಸ್ವತಿತೀರದಲಿ ಬಿ- । ನ್ನೈಸಲಾಮುನಿಗಳ ನುಡಿಗೆ ಜಡ- । ಜಾಸನ ಮಹೇಶಾಚ್ಯುತರ ಲೋಕಂಗಳಿಗೆ ಪೋಗೀ ॥ ತಾ ಸಕಲಗುಣಗಳ ವಿಚಾರಿಸೆ । ಕೇಶವನೆ ಪರದೈವವೆಂದುಪ- । ದೇಶಿಸಿದ ಭೃಗುಮುನಿಪ ಕೊಡಲೆಮಗಖಿಳ ಪುರುಷಾರ್ಥ ॥ ೨೭ ॥

ಬಿಸರುಹಾಂಬಕನಾಜ್ಞೆಯಲಿ ಸುಮ- । ನಸಮುಖನು ತಾನೆನಿಸಿ ನಾನಾ । ರಸಗಳುಳ್ಳ ಹವಿಸ್ಸುಗಳನವರವರಿಗೊಯಿದ್ವಾ ವಾ ॥ ವಸುಕುಲಾಧಿಪ ಯಜ್ಞಪುರುಷನ । ಅಸಮಬಲರೂಪಂಗಳಿಗೆ ವಂ- । ದಿಸುವೆ ಜ್ಞಾನ ಯಶಸ್ಸು ವಿದ್ಯಾ ಬುದ್ಧಿ ಕೊಡಲೆಮಗೆ ॥ ೨೮ ॥

ತಾತನಪ್ಪಣೆಯಿಂದ ನೀ ಪ್ರ- । ಖ್ಯಾತಿಯುಳ್ಳರವತ್ತು ಮಕ್ಕಳ । ಪ್ರೀತಿಯಿಂದಲಿ ಪಡೆದವರವರಿಗಿತ್ತು ಮನ್ನಿಸಿದೆ ॥ ವೀತಿಹೋತ್ರನ ಸಮಳೆನಿಸುವ ಪ್ರ- । ಸೂತಿ ಜನನಿ ತ್ವದಂಘ್ರಿ ಕಮಲಕೆ । ನಾ ತುತಿಸಿ ತಲೆವಾಗುವೆಮ್ಮ ಕುಟುಂಬ ಸಲಹುವದೂ ॥ ೨೯ ॥

ಶತಧೃತಿಯ ಸುತರೀರ್ವರುಳಿದ- । ಪ್ರತಿಮ ಸುತಪೋನಿಧಿಗಳ ಪರಾ- । ಜಿತನ ಸುಸಮಾಧಿಯೊಳೊಲಿಸಿ ಮೂಲೋಕದೊಳು ಮೆರೆವಾ ॥ ವ್ರತಿವರ ಮರೀಚ್ಯತ್ರಿಪುಲಹಾ । ಕ್ರತು ವಸಿಷ್ಠ ಪುಲಸ್ತ್ಯ ವೈವ- । ಸ್ವತನು ವಿಶ್ವಾಮಿತ್ರರಂಗಿರರಂಘ್ರಿಗೆರಗುವೆನು ॥ ೩೦ ॥

ದ್ವಾದಶಾದಿತ್ಯರೊಳು ಮೊದಲಿಗ- । ನಾದ ಮಿತ್ರ ಪ್ರವಹಮಾನಿನಿ- । ಯಾದ ಪ್ರಾವಹಿ ನಿಋತಿನಿರ್ಜರ ಗುರುಮಹಿಳೆ ತಾರಾ ॥ ಈ ದಿವೌಕಸರನುದಿನಾಧಿ- । ವ್ಯಾಧಿಯುಪಟಳವಳಿದು ವಿಬುಧರಿ- । ಗಾದರದಿ ಕೊಡಲಖಿಳ ಮಂಗಳವಾವಕಾಲದಲಿ ॥ ೩೧ ॥

ಮಾನನಿಧಿಗಳೆನಿಸುವ ವಿಷ್ವ- । ಕ್ಸೇನಧನದಾದ್ಯನಿಮಿಷರಿಗೆ ಸ- । ಮಾನರೆಂಭತ್ತೈದು ಶೇಷಶತಸ್ಥ ದೇವಗಣ ॥ ಆ ನಮಿಸುವೆನು ಬಿಡದೆ ಮಿಥ್ಯಾ- । ಜ್ಞಾನಕಳೆದು ಸುಬೋಧವಿತ್ತು ಸ- । ದಾನುರಾಗದಲೆಮ್ಮ ಪರಿಪಾಲಿಸಲಿ ಸಂಪದವಾ ॥ ೩೨ ॥

ಭೂತಮಾರುತಮಾಂತರಭಿಮಾ- । ನೀ ತಪಸ್ವಿಮರೀಚಿಮುನಿಪುರು- । ಹೂತನಂದನ ಪಾದಮಾನಿ ಜಯಂತರೆಮಗೊಲಿದು ॥ ಕಾತರವ ಪುಟ್ಟಿಸದೆ ವಿಷಯದಿ । ವೀತಭಯನ ಪದಾಬ್ಜದಲಿ ವಿಪ- । ರೀತಬುದ್ಧಿಯನೀಯದೆ ಸದಾ ಪಾಲಿಸಲಿ ನಮ್ಮ ॥ ೩೩ ॥

ಓದಿಸುವ ಗುರುಗಳನೆ ಜರಿದು ಸ- । ಹೋದರಂಗುಪದೇಶಿಸಿದ ಮಹ- । ದಾದಿಕಾರಣ ಸರ್ವಗುಣಸಂಪೂರ್ಣ ಹರಿಯೆಂದು ॥ ವಾದಿಸುವ ತತ್ಪಿತಿಯುತೋರಿಂ- । ದಾದನುಜ ಬೆಸಗೊಳಲು ಸ್ತಂಭದಿ । ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥ ೩೪ ॥

ಬಲಿಮೊದಲು ಸಪ್ತೇಂದ್ರರಿವರಿಗೆ । ಕಲಿತಕರ್ಮಜ ದಿವಿಜರೆಂಬರು । ಉಳಿದಯೇಕಾದಶಮನುಗಳು ವುಚಥ್ಯಚವನಮುಖಾ ॥ ಕುಲಋಷಿಗಳೆಂಭತ್ತು ಹೈಹಯ- । ನಿಳೆಯ ಕಂಪನಗೈದ ಪೃಥು ಮಂ- । ಗಳಪರೀಕ್ಷಿತ ನಹುಷ ನಾಭಿ ಯಯಾತಿ ಶಶಿಬಿಂದು ॥ ೩೫ ॥

ಶತಕಸಂಕೇತುಳ್ಳಪ್ರೀಯು- । ವ್ರತ ಭರತ ಮಾಂಧಾತ ಪುಣ್ಯಾ- । ಶ್ರಿತರು ಜಯವಿಜಯಾದಿಗಳು ಗಂಧರ್ವರೆಂಟುಜನಾ ॥ ಹುತವಹಜ ಪಾವಕ ಸನಾತನ । ಪಿತೃಗಳೇಳ್ವರು ಚಿತ್ರಗುಪ್ತರು । ಪ್ರತಿದಿವಸ ಪಾಲಿಸಲಿ ತಮ್ಮವನೆಂದು ಯೆಮಗೊಲಿದು ॥ ೩೬ ॥

ವಾಸವಾಲಯಶಿಲ್ಪಿ ವಿಮಲಜ- । ಲಾಶಯಗಳೊಳು ರಮಿಪ ಊರ್ವಶಿ । ಭೇಶ ರವಿಗಳ ರಿಪುಗಳೆನಿಸುವ ರಾಹುಕೇತುಗಳೂ ॥ ಶ್ರೀಶಪದಪಂಥಾನ ಧೂಮಾ- । ರ್ಚೀಶ ದಿವಿಜರು ಕರ್ಮಜರಿಗೆ ಸ- । ದಾಸಮಾನ ದಿವೌಕಸರು ಕೊಡಲೆಮಗೆ ಮಂಗಳವಾ ॥ ೩೭ ॥

ದ್ಯುನದಿ ಶಾಮಲಸಂಜ್ಞ ರೋಹಿಣಿ । ಧನಪ ಪರ್ಜನ್ಯಾನಿರುದ್ಧನ । ವನಿತೆ ಬ್ರಹ್ಮಾಂಡಾಭಿಮಾನಿ ವಿರಾಟದೇವಿಯರಾ ॥ ನೆನೆವೆ ನಾನಲವಿಂದ ದೇವಾ- । ನನಮುಹಿಳೆ ಸ್ವಾಹಾಖ್ಯರಾಲೋ- । ಚನೆಕೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ ॥ ೩೮ ॥

ವಿಧಿಪಿತನ ಪಾದಾಂಬುಜಗಳಿಗೆ । ಮಧುಪನಂತೆ ವಿರಾಜಿಪಾಮಲ । ಉದಕಗಳಿಗೆ ಸದಾಭಿಮಾನಿಗಳೆಂದೆನಿಸಿಕೊಂಬಾ ॥ ಬುಧಗೆ ನಾವಂದಿಸುವೆ ಸನ್ಮೋ- । ದದಿ ನಿರಂತರ ವಲಿದು ಯೆಮಗ- । ಭ್ಯುದಯ ಪಾಲಿಸಲೆಂದು ಪರಮೋತ್ಸವದಲನುದಿನದಿ ॥ ೩೯ ॥

ಶ್ರೀವಿರಿಂಚಾದ್ಯರ ಮನಕೆ ನಿಲು- । ಕಾವಕಾಲಕು ಜನನರಹಿತನ । ತಾ ವಲಿಸಿ ಮಗನೆಂದು ಮುದ್ದಿಸಿ ಲೀಲೆಗಳ ನೋಳ್ಪ ॥ ದೇವಕಿಗೆ ವಂದಿಪೆ ಯಶೋದಾ- । ದೇವಿಗಾನಮಿಸುವೆನು ಬಿಡದೆ ಕೃ- । ಪಾವಲೋಕನ ದಿಂದ ಸಲಹುವದೆಮ್ಮ ಸಂತತಿಯಾ ॥ ೪೦ ॥

ಪಾಮರರ ಸುಪವಿತ್ರಗೈಸುವ । ಶ್ರೀಮುಕುಂದನ ವಿಮಲ ಮಂಗಳ । ನಾಮಗಳಿಗಭಿಮಾನಿಯಾದ ಉಷಾಖ್ಯದೇವಿಯರಾ ॥ ಭೂಮಿಯೊಳಗುಳ್ಳಖಿಳ ಸಜ್ಜನ- । ರಾಮಯಾದಿಗಳಳಿದು ಸಲಹಲಿ । ಆಮರುತ್ತನ ಮನೆಯುವೈದ್ಯರ ರಮಣಿ ಪ್ರತಿದಿನದಿ ॥ ೪೧ ॥

ಪುರುಟಲೋಚನ ನಿನ್ನ ಕದ್ದೊ- । ಯ್ದರಲು ಪ್ರಾರ್ಥಿಸೆ ದೇವತೆಗಳು- । ತ್ತರವ ಲಾಲಿಸಿ ತಂದ ವರಹಾರೂಪ ತಾನಾಗಿ ॥ ಧರಣಿಜನನೀ ನಿನ್ನ ಪಾದಕೆ । ಎರಗಿ ಬಿನ್ನೈಸುವೆನು ಪಾದ- । ಸ್ಪರುಶ ವೊದಲಾದಖಿಳ ದೋಷಗಳೆಣಿಸದಿರುಯೆಂದು ॥ ೪೨ ॥

ವನಧಿವಸನೆ ವರಾದ್ರಿನಿಚಯು- । ಸ್ತನವಿರಾಜಿತೆ ಚೇತನಾಚೇ- । ತನವಿಧಾರಕೆ ಗಂಧರಸ ರೂಪಾದಿಗುಣವಪುಷೆ ॥ ಮುನಿಕುಲೋತ್ತಮ ಕಶ್ಯಪನ ನಿಜ- । ತನುಜೆ ನಿನಗಾನಮಿಪೆ ಯೆನ್ನವ- । ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ ॥ ೪೩ ॥

ಹರಿಗುರುಗಳರ್ಚಿಸದ ಪಾಪಾ- । ತ್ಮರನ ಶಿಕ್ಷಿಸಲೋಸುಗ ಶನ್ಯೈ- । ಶ್ಚರನೆನಿಸಿ ದುಷ್ಫಲಗಳೀವೆ ನಿರಂತರವು ಬಿಡದೇ ॥ ತರಣಿನಂದನ ನಿನ್ನ ಪಾದಾಂ- । ಬುರುಹಗಳಿಗಾನಮಿಪೆ ಬಹು ದು- । ಸ್ತರಭವಾರ್ಣವ ಮಗ್ನನಾದೆನ್ನುದ್ಧರಿಸಬೇಕು ॥ ೪೪ ॥

ನಿರತಿಶಯ ಸುಜ್ಞಾನಪೂರ್ವಕ । ವಿರಚಿಸುವ ನಿಷ್ಕಾಮ ಕರ್ಮಗ- । ಳರಿತು ತತ್ತತ್ಕಾಲದಲಿ ತಜ್ಜನ್ಯಫಲರಸವ ॥ ಹರಿಯ ನೇಮದಲುಣಿಸಿ ಬಹು ಜೀ- । ವರಿಗೆ ಕರ್ಮಪನೆನಿಪ ಗುರುವು- । ಷ್ಕರನು ಸತ್ಕರ್ಮಗಳಲಿ ನಿರ್ವಿಘ್ನತೆಯ ಕೊಡಲಿ ॥ ೪೫ ॥

ಶ್ರೀನಿವಾಸನ ಪರಮಕಾರು- । ಣ್ಯಾನಿವಾಸಸ್ಥಾನರೆನಿಪ ಕೃ- । ಶಾನುಜರು ಸಾಹಸ್ರಷೋಡಶ ಶತರು ಶ್ರೀಕೃಷ್ಣಾ ॥ ಮಾನಿನಿಯರೆಪ್ಪತ್ತು ಯಕ್ಷರು । ದಾನವರು ಮೂವತ್ತು ಚಾರಣ- । ಜಾನಜಾಮರರಪ್ಸರರು ಗಂಧರ್ವರಿಗೆ ನಮಿಪೆ ॥ ೪೬ ॥

ಕಿನ್ನರರು ಗುಹ್ಯಕರು ರಾಕ್ಷಸ- । ಪನ್ನಗರು ಪಿತೃಗಳು ಸುಸಿದ್ಧರು । ಸನ್ನುತಾಜಾನುಜರು ಸಮರಿವರಮರಯೋನಿಜರೂ ॥ ಇನ್ನಿವರ ಗಣವೆಂತು ಬಣ್ಣಿಸ- । ಲೆನ್ನಳವೆ ಕರುಣದಲಿ ಪರಮಾ- । ಪನ್ನಜನರಿಗೆ ಕೊಡಲಿ ಸನ್ಮುದ ಸುಪ್ರತಾಪಗಳಾ ॥ ೪೭ ॥

ಆಯಮುನೆಯೊಳು ಸಾದರದಿ ಕಾ- । ತ್ಯಾಯನೀ ವ್ರತಧರಿಸಿ ಕೆಲರು ದ- । ರಾಯುಧನೆ ಪತಿಯೆನಿಸಿ ಕೆಲಬರು ಜಾರತನದಲ್ಲಿ ॥ ವಾಯುಪಿತನೊಲಿಸಿದರು ಇವರಿಗೆ । ತೋಯಜಾಕ್ಷಿಯರವರ ಪಾದಕೆ । ನಾಯೆರಗುವೆ ಮನೋರಥಂಗಳ ಸಲಿಸಲನುದಿನವೂ ॥ ೪೮ ॥

ನೂರುಮುನಿಗಳನುಳಿದು ಮೇಲಿ- । ನ್ನೂರುಕೋಟಿ ತಪೋಧನರ ಪಾ- । ದಾರವಿಂದಕೆ ಮುಗಿವೆ ಕರಗಳನುದ್ಧರಿಸಲೆಂದು ॥ ಮೂರು ಸಪ್ತ ಶತಾಹ್ವಯರ ತೊರ- । ದೀಋಷಿಗಳಿಗನಂತರದಲಿಹ । ಭೂರಿಪಿತೃಗಳು ಕೊಡಲಿ ನಮಗೆ ಸದಾ ಸುಮಂಗಳವಾ ॥ ೪೯ ॥

ಪಾವನಕೆ ಪಾವನನೆನಿಸುವ ರ- । ಮಾವಿನೋದನ ಗುಣಗಣಂಗಳ । ಸಾವಧಾನದಲೇಕಮಾನಸರಾಗಿ ಸುಸ್ವರದಿ ॥ ಆವಿಬುಧಪತಿ ಸಭೆಯೊಳಗೆ ನಾ- । ನಾ ವಿಲಾಸದಿ ಪಾಡಿ ಸುಖಿಸುವ । ದೇವಗಂಧರ್ವರು ಕೊಡಲಿ ಯೆಮಗಖಿಳಪುರುಷಾರ್ಥ ॥ ೫೦ ॥

ಭುವನಪಾವನನೆನಿಪ ಲಕ್ಷ್ಮೀ- । ಧವನ ಮಂಗಳದಿವ್ಯನಾಮ- । ಸ್ತವನ ಗೈವ ಮನುಷ್ಯಗಂಧರ್ವರಿಗೆ ವಂದಿಸುವೇ ॥ ಪ್ರವರಭೂಭುಜರುಳಿದು ಮಧ್ಯಮ । ಕುವಲಯಪರೆಂದೆನಿಸಿಕೊಂಬರ । ದಿವಸದಿವಸಂಗಳಲಿ ನೆನೆವೆನು ಕರಣಶುದ್ಧಿಯಲಿ ॥ ೫೧ ॥

ಶ್ರೀಮುಕುಂದನ ಮೂರ್ತಿಗಳ ಸೌ- । ದಾಮಿನಿಯವೋಲ್ ಹೃದಯವಾರಿಜ- । ವ್ಯೋಮಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ । ಆ ಮನುಷ್ಯೋತ್ತಮರ ಪದಯುಗ । ತಾಮರಸಗಳಿಗೆರಗುವೆ ಸದಾ । ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತಜನತತಿಯ ॥ ೫೨ ॥

ಈಮಹೀಮಂಡಲದೊಳಿಹ ಗುರು । ಶ್ರೀಮದಾಚಾರ್ಯರ ಮತಾನುಗ- । ರಾ ಮಹಾವೈಷ್ಣವರ ವಿಷ್ಣುಪದಾಬ್ಜಮಧುಕರರ ॥ ಸ್ತೋಮಕಾನಮಿಸುವೆನವರವರ । ನಾಮಗಳ ಪೇಳಳವೆ ಬಹುವಿಧ । ಯಾವ ಯಾವಂಗಳಲಿ ಬೋಧಿಸಲೆನಗೆ ಸನ್ಮತಿಯ ॥ ೫೩ ॥

ಮಾರನಯ್ಯನ ಕರುಣಪಾರಾ- । ವಾರಮುಖ್ಯಸುಪಾತ್ರರೆನಿಪ ಸ- । ರೋರುಹಾಸನ ವಾಣಿ ರುದ್ರೇಂದ್ರಾದಿ ಸುರನಿಕರ ॥ ತಾರತಮ್ಯಾತ್ಮಕ ಸುಪದ್ಯಗ- । ಳಾರು ಪಠಿಸುವರಾ ಜನರಿಗೆ ರ- । ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ॥ ೫೪ ॥

ಮೂರು ಕಾಲಂಗಳಲಿ ಪಠಿಸೆ ಶ- । ರೀರವಾಙ್ಮನ ಶುದ್ಧಿಮಾಳ್ಪುದು । ದೂರಗೈಸುವದಖಿಳ ಪಾಪಸಮೂಹ ಪ್ರತಿದಿನವೂ ॥ ಚೋರಭಯ ರಾಜಭಯ ನಕ್ರ ಚ- । ಮೂರು ಶಸ್ತ್ರ ಜಲಾಗ್ನಿ ಭೂತ ಮ- । ಹೋರಗಜ್ವರ ನರಕಭಯ ಸಂಭವಿಸದೆಂದೆಂದು ॥ ೫೫ ॥

ಜಯಜಯತು ತ್ರಿಜಗದ್ವಿಲಕ್ಷಣ । ಜಯಜಯತು ಜಗದೇಕಕಾರಣ । ಜಯಜಯತು ಜಾನಕಿರಮಣ ನಿರ್ಗತಜರಾಮರಣ ॥ ಜಯಜಯತು ಜಾಹ್ನವಿಜನಕ ಜಯ । ಜಯತು ದೈತ್ಯಕುಲಾಂತಕ ಭವಾ- । ಮಯಹರ ಜಗನ್ನಾಥವಿಟ್ಠಲ ಪಾಹಿ ಮಾಂ ಸತತ ॥ ೫೬ ॥

ಅಂತು ಸಂಧಿ ೩೨ಕ್ಕೆ ಪದ ೯೮೮ಕ್ಕೆ ದೇವತಾತಾರತಮ್ಯಸಂಧಿ ಸಮಾಪ್ತ.

## ಹರಿಕಥಾಮೃತಸಾರವು ಸಂಪೂರ್ಣವು.

ಶ್ರೀಕೃಷ್ಣಾರ್ಪಣಮಸ್ತು.

## ೩೩. ಫಲಸ್ತುತಿಸಂಧಿ.

ಶ್ರೀಮದ್ಧರಿಕಥಾಮೃತಸಾರವು ಸಚ್ಛಾಸ್ತ್ರಸಾರವು; ಇದರ ಶ್ರವಣ ಮನನಾದಿ ಮಾಡತಕ್ಕ ಸುಜನರಿಗೆ ಶ್ರೀಹರಿಯು ಪ್ರತ್ಯಕ್ಷನಾಗಿ ಮೋಕ್ಷಾದಿ ಪುರುಷಾರ್ಥ ಕೊಡುವನೆಂದು ಶ್ರೀಮಜ್ಜಗನ್ನಾಥ ದಾಸಾರ್ಯರ ಸಾಕ್ಷಾಚ್ಛಿಷ್ಯರಾದ ಕರ್ಜಗೀ ದಾಸಪ್ಪದಾಸರು ವಿವರಿಸುತ್ತಾರೆ.



॥ ಶ್ರೀಗುರುಭ್ಯೋ ನಮಃ ॥

### (ಭಾಮಿನಿ ಷಟ್ಪದಿ.)

ರಾಗ ಕಾಪಿ, ಮಟ್ಟೆತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಹರಿಕಥಾಮೃತಸಾರ ಶ್ರೀಮ- । ದ್ಗುರುವರ ಜಗನ್ನಾಥ ದಾಸರ ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳಾ ॥ ಪರಮ ಪಂಡಿತ ಮಾನಿಗಳು ಮ- । ತ್ಸರಿಸಲೆದೆಗಿಚ್ಚಾಗಿ ತೋರುವ- । ದರಸಿಕರಿಗಿದು ತೋರಿ ಪೇಳುವದಲ್ಲ ಧರೆಯೊಳಗೆ ॥ ೧ ॥

ಭಾಮಿನಿಯು ಷಟ್ಪದಿಯು ರೂಪದ- । ಲೀ ಮಹಾದ್ಭುತ ಕಾವ್ಯದಾದಿಯೊ- । ಳಾಮನೋಹರ ತರತಮಾತ್ಮಕ ನಾಂದಿಪದ್ಯಗಳ ॥ ಯಾಮ ಯಾಮಕೆ ಪಠಿಸುವವರ ಸು- । ದಾಮಸಖ ಕೈಪಿಡಿಯಲೋಸುಗ । ಪ್ರೇಮದಿಂದಲಿ ಪೇಳ್ದ ಗುರು ಕಾರುಣ್ಯಕೇನೆಂಬೆ ॥ ೨ ॥

ಸಾರವೆಂದರೆ ಹರಿಕಥಾಮೃತ । ಸಾರಿದೆಂಬುವದೆಮ್ಮ ಗುರುವರ । ಸಾರಿದಲ್ಲದೆ ತಿಳಿಯೊದೆನುತ ಮಹೇಂದ್ರನಂದನನಾ ॥ ಸಾರಥಿಯು ಬಲಗೊಂಡು ಸಾರಾ- । ಸಾರಗಳ ನಿರ್ಣೈಸಿ ಪೇಳ್ದನು- । ಸಾರ ನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹದೋ ॥ ೩ ॥

ದಾಸವರ್ಯರ ಮುಖದಿ ನಿಂದು ರ- । ಮೇಶನನು ಕೀರ್ತಿಸುವ ಮನದಭಿ- । ಲಾಷೆಯಲಿ ವರ್ಣಾಭಿಮಾನಿಗಳೊಳಿದು ಪೇಳಿಸಿದಾ ॥ ಈ ಸುಲಕ್ಷಣ ಕಾವ್ಯದೋಳ್ ಯತಿ । ಪ್ರಾಸಗಳಿಗೆ ಪ್ರಯತ್ನವಿಲ್ಲದೆ । ಲೇಸು ಲೇಸೆನೆ ಶ್ರಾವ್ಯವಾದುದೆ ಕುರುಹು ಕವಿಗಳಿಗೆ ॥ ೪ ॥

ಪ್ರಾಕೃತೋಕ್ತಿಗಳಿಂದು ಬರಿದೆ ಮು- । ಹಾ ಕೃತಘ್ನರು ಜರಿವರಲ್ಲದೆ । ಸ್ವೀಕೃತವ ಮಾಡದಲೆ ಬಿಡುವರೆ ಸುಜನರಾದವರು ॥ ಶ್ರೀಕೃತೀಪತಿಯಮಲ ಗುಣಗಳು । ಈ ಕೃತಿಯೊಳುಂಟಾದ ಬಳಿಕ । ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ ॥ ೫ ॥

ಶ್ರುತಿಗೆ ಶೋಭನವಾಗದೊಡೆ ಜಡ- । ಮತಿಗೆ ಮಂಗಳವೀಯದೊಡೆ ಶ್ರುತಿ- । ಸ್ಮೃತಿಗೆ ಸಮ್ಮತವಿಲ್ಲದಿದ್ದೊಡೆ ನಮ್ಮ ಗುರುರಾಯಾ ॥ ಮಥಿಸಿ ಮಧ್ವಾಗಮ ಪಯೋಬ್ಧಿಯ । ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾ- । ರತರಿಗೀಪ್ಸಿತ ಹರಿಕಥಾಮೃತಸಾರವೆನಿಸುವದೂ ॥ ೬ ॥

ಭಕ್ತಿವಾದದಿ ಪೇಳ್ದನೆಂಬ ಪ್ರ- । ಸಕ್ತಿ ಸಲ್ಲದು ಕಾವ್ಯದೊಳು ಪುನ- । ರುಕ್ತಿ ಶುಷ್ಕಸಮಾಸಪದ ವ್ಯತ್ಯಾಸ ಮೊದಲಾದಾ ॥ ಯುಕ್ತಿ ಶಾಸ್ತ್ರ ವಿರುದ್ಧ ಶಬ್ದವಿ- । ಭಕ್ತಿ ವಿಷಮಗಳಿರಲು ಜೀವ- । ನ್ಮುಕ್ತಿಯೋಗ್ಯವಿದೆಂದು ಸಿರಿಮುದನಂತ ಮೆಚ್ಚುವನೆ ॥ ೭ ॥

ಆಶುಕವಿಕುಲಕಲ್ಪತರು ದಿ- । ಗ್ದೇಶವರಿಯಲು ರಂಗನೊಲುಮೆಯ । ದಾಸಕೂಟಸ್ಥರಿಗೆರಗಿ ನಾ ಬೇಡಿಕೊಂಬುವೆನು ॥ ಈ ಸುಲಕ್ಷಣ ಹರಿಕಥಾಮೃತ । ವ್ಯಾಸಲಲಿಯದ ಸಾರದೀರ್ಘ- । ದ್ವೇಷಿಗಳಿಗರಿಸದಲೆ ಸಲಿಸುವದೆನ್ನ ಬಿನ್ನಪವಾ ॥ ೮ ॥

ಪ್ರಾಸಗಳ ಪೊಂದಿಸದೆ ಶಬ್ದ । ಶ್ಲೇಷಗಳ ಶೋಧಿಸದೆ ದೀರ್ಘ । ಹ್ರಾಸಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೇ ॥ ದೂಷಕರು ದಿನದಿನದಿ ಮಾಡುವ । ದೂಷಣವೆ ಭೂಷಣಗಳೆಂದುಪ- । ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ ॥ ೯ ॥

ಅಶ್ರುತಾಗಮ ಭಾವವಿದರ ಪ- । ರಿಶ್ರಮವು ಬಲ್ಲವರಿಗಾನಂ- । ದಾಶ್ರುಗಳು ಮಳೆಗರಿಸಿ ಮೈಮರೆಸುವ ಚಮತ್ಕೃತಿಯಾ ॥ ಮಿಶ್ರರಿಗೆ ಮರೆ ಮಾಡಿ ದಿವಿಜರ- । ಜಸ್ರದಲಿ ಕಾಯ್ದಿಪ್ಪರಿದರೊಳು । ಪಶ್ರುತಿಗಳುರೆ ತಪ್ಪುವವೆ ನಿಜ ಭಕ್ತಿಯುಕ್ತರಿಗೆ ॥ ೧೦ ॥

ನಿಚ್ಚ ನಿಜಜನ ನೆಚ್ಚಿ ನೆಲೆಗೊಂ- । ಡಚ್ಚ ಬಾಗ್ಯವು ಪೆಚ್ಚಪೆರ್ಪೆ ಯು । ಕೆಚ್ಚಕೇಳ್ಕನ ಮೆಚ್ಚಿಮುಲವರ ಮುಚ್ಚಲೆಂದೆನುತಾ ॥ ಉಚ್ಚವಿಗ ಳಿಗೆ ಪೊಚ್ಚ ಪೊಸದೆನ- । ಲುಚ್ಚರಿಸಿದೀಸುಚ್ಚರಿತ್ರೆಯ- । ನುಚ್ಚರಿಸೆ ಸಿರಿವ ತ್ಸಲಾಂಛನ ಮೆಚ್ಚಲೇನರಿದೂ ॥ ೧೧ ॥

ಸಾಧುಸಭೆಯೊಳ್ಮೆರೆಯೆ ತತ್ವ ಸು- । ಬೋಧವೃಷ್ಟಿಯು ಗರೆಯೆ ಕಾಮ । ಕ್ರೋಧಬೀಜವು ಹುರಿಯೆ ಖಳರೆದೆ ಬಿರಿಯೆ ಕರಕರಿಯಾ ॥ ವಾದಿಗಳ ಪಲ್ಮುರಿಯೆ ಪರಮವಿ- । ನೋದಿಗಳ ಮೈಮರೆಯಲೋಸುಗ । ಹಾದಿದೋರಿದ ಹಿರಿಯ ಬಹುಚಾತುರ್ಯ ಹೊಸಪರಿಯಾ ॥ ೧೨ ॥

ವ್ಯಾಸತೀರ್ಥರ ವಲವೊ ವಿಠಲೋ- । ಪಾಸಕ ಪ್ರಭುವರ್ಯ ಪುರಂ ದರ । ದಾಸರಾಯರ ದಯವೊ ತಿಳಿಯದು ಓದಿಕೇಳದಲೇ ॥ ಕೇಶ ವನ ಗುಣ ಮಣಿಗಳನು ಪ್ರಾ- । ಣೇಶಗರ್ಪಿಸಿ ವಾದಿರಾಜರ । ಕೋಶ ಕೊಪ್ಪುವ ಹರಿಕಥಾಮೃತಸಾರ ಪೇಳಿದರೂ ॥ ೧೩ ॥

ಹರಿಕಥಾಮೃತಸಾರ ನವರಸ- । ಭರಿತ ಗುಣಗಂಭೀರ ರತ್ನಾ- । ಕರರುಚಿರ ಶೃಂಗಾರ ಸಾಲಂಕಾರ ವಿಸ್ತಾರ ॥ ಸರಸನರಕಂಠೀರವಾ ಚಾ- । ರ್ಯರ ಜನಿತ ಸುಕುಮಾರ ಸಾತ್ವೀ- । ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರಾ ॥ ೧೪ ॥

ಅವನಿಯೊಳು ಜ್ಯೋತಿಷ್ಮತಿಯ ತೈ- । ಲವನು ಪಾಮರನುಂಡು ಜೀರ್ಣಿಸ- । ಲವನೆ ಪಂಡಿತನೋಕರಿಸಲವಿವೇಕಿಯಪ್ಪಂತೆ ॥ ಶ್ರವಣ ಮಂಗಲ ಹರಿಕಥಾಮೃತ । ಸವಿದು ನಿರ್ಗುಣಸಾರಮಕ್ಕಿಸ- । ಲವ ನಿಪುಣನೈ ಯೋಗ್ಯಗಲ್ಲದೆ ದಕ್ಕಲರಿಯದಿದೂ ॥ ೧೫ ॥

ಅಕ್ಕರದೊಳೀಕಾವ್ಯದೊಳಗೊಂ- । ದಕ್ಕರವ ಬರದೋದಿದವ ದೇ- । ವರ್ಕಳಿಗೆ ದುಸ್ತ್ಯಜನೆನಿಸಿ ಧರ್ಮಾರ್ಥ ಕಾಮುಗಳಾ ॥ ಲೆಕ್ಕಿಸದೆ ಲೋಕೈಕಸಾಧನ । ಭಕ್ತಿಭಾಗ್ಯವ ಪಡೆವ ಜೀವ- । ನ್ಮುಕ್ತಗಲ್ಲದೆ ಹರಿಕಥಾಮೃತಸಾರ ಸೊಗಸುವದೇ ॥ ೧೬ ॥

ಒತ್ತಿ ಬಹ ವಿಘ್ನಗಳ ತಡೆವಪ- । ಮೃತ್ಯುವಿಗೆ ಮರೆಮಾಡಿ ಕಾಲನ । ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲಸಿದ್ಧಿಗಳಾ ॥ ಪೂರ್ತಿಗೊಳಿಸುವ ವನರುಹೇಕ್ಷಣ । ನೃತ್ಯಮಾಡುವನವನ ಮನೆಯೊಳು । ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರಾ ॥ ೧೭ ॥

ಆಯುರಾರೋಗ್ಯೈಶ್ವರಿಯು ಯಶ । ಧೈರ್ಯ ಬಲವಿಜ್ಞಾನಸಮುಸಾ- । ಹಾಯಶೌರ್ಯೋದಾರ್ಯ ಗುಣಗಾಂಭೀರ್ಯ ಮೊದಲಾದಾ ॥ ಆಯುತಗಳುಂಟಾಗಲೊಂದ- । ಧ್ಯಾಯ ಪಠಿಸಿದ ಮಾತ್ರದಿಂ ಶ್ರವ- । ಣೀಯವಲ್ಲವೆ ಹರಿಕಥಾಮೃತಸಾರ ಸುಜನರಿಗೇ ॥ ೧೮ ॥

ಕುರುಡ ಕಂಗಳ ಪಡೆವ ಬಧಿರನಿ- । ಗೆರಡು ಕಿವಿ ಕೇಳ್ಬಹವು ಬೆಳೆಯದ । ಮುರುಡ ಮದನಾಕೃತಿಯು ತಾಳ್ವನು ಕೇಳ್ದ ಮಾತ್ರದಲೀ ॥ ಬರಡು ಹೈನಾಗುವದು ಕೇಳ್ದರೆ । ಕೊರಡು ಪಲ್ಲವಿಸುವದು ಪ್ರತಿದಿನ । ಹುರುಡಿಲಾದರು ಹರಿಕಥಾಮೃತಸಾರವನು ಪಠಿಸೇ ॥ ೧೯ ॥

ನಿರ್ಜರತರಂಗಿಣಿಯೊಳನುದಿನ । ಮಜ್ಜನಾದಿ ಸಮಸ್ತ ಕರ್ಮವಿ- । ವರ್ಜಿತಾಶಾಪಾಶದಿಂದಲಿ ಮಾಡಿದಧಿಕಫಲಾ ॥ ಹೆಜ್ಜೆಹೆಜ್ಜೆಗೆ ದೊರಿಯುದಿಪ್ಪವೆ । ಸಜ್ಜನರು ಶಿರದೂಗುವಂದದಿ । ಗರ್ಜಿಸುತಲೀಹರಿಕಥಾಮೃತಸಾರ ಪಠಿಸುವರಾ ॥ ೨೦ ॥

ಸತಿಯರಿಗೆ ಪತಿಭಕುತಿ ಪತ್ನಿ- । ವ್ರತ ಪುರುಷರಿಗೆ ಹರುಷ ನೆಲೆಗೊಂ- । ಡತಿ ಮನೋಹರರಾಗಿ ಗುರುಹಿರಿಯರಿಗೆ ಜಗದೊಳಗೆ ॥ ಸತತ ಮಂಗಳವೀಯುವ ಬಹು ಸು- । ಕೃತಗಳೆನಿಸುತ ಸುಲಭದಿಂ ಸ- । ದ್ಗತಿಯು ಪಡೆವರು ಹರಿಕಥಾಮೃತಸಾರವನು ಪಠಿಸೇ ॥ ೨೧ ॥

ಎಂತು ವರ್ಣಿಸಲೆನ್ನಳವೆ ಭಗ- । ವಂತನಮಲಗುಣಾನುವಾದ ಗ- । ಳೆಂತುಪರಿಯಲಿ ಪೂರ್ಣಬೋಧರ ಮತವ ಪೊಂದಿದರಾ ॥ ಚಿಂತನೆಗೆ ಬಪ್ಪಂತೆ ಬಹು ದೃ- । ಷ್ಟಾಂತಪೂರ್ವಕವಾಗಿ ಪೇಳ್ದ ಮ- । ಹಂತರಿಗೆ ನರರೆಂದು ಬಗುವರೆ ನಿರಯಭಾಗಿಗಳೂ ॥ ೨೨ ॥

ಮಣಿಖಚಿತಹರಿವಾಣದಲಿ ವಾ- । ರಣ ಸುಭೋಜ್ಯಪದಾರ್ಥ ಕೃಷ್ಣಾ- । ರ್ಪಣವೆನುತ ಪಸಿದವರಗೋಸುಗ ನೀಡುವಂದದಲೀ ॥ ಪ್ರಣತರಿಗೆ ಪೊಂಗನಡವರವಾ- । ಙ್ಮಣಿಗಳಿಂ ವಿರಚಿಸಿದ ಕೃತಿಯೋ- । ಳುಣಿಸಿ ನೋಡುವ ಹರಿಕಥಾಮೃತಸಾರವನುದಾರಾ ॥ ೨೩ ॥

ದುಷ್ಟರೆನ್ನದೆ ದುರ್ವಿಷಯದಿಂ । ಪುಷ್ಟರೆನ್ನದೆ ಪೂತಕರ್ಮ । ಭ್ರಷ್ಟರೆನ್ನದೆ ಶ್ರೀದವಿಟ್ಠಲ ವೇಣುಗೋಪಾಲಾ ॥ ಕೃಷ್ಣಕೈಪಿಡಿಯುವನು ಸತ್ಯ ವಿ- । ಶಿಷ್ಟ ದಾಸತ್ವವನು ಪಾಲಿಸಿ । ನಿಷ್ಠೆಯಿಂದಲಿ ಹರಿಕಥಾಮೃತಸಾರ ಪಠಿಸುವರಾ ॥ ೨೪ ॥

**ಅಂತು ಸಂಧಿ ೩೩ಕ್ಕೆ ಪದ ೧೦೧೨ಕ್ಕೆ ಶ್ರೀಮಜ್ಜಗನ್ನಾಥ ದಾಸರಾಜರ ಸಾಕ್ಷಾಚ್ಛಿಷ್ಯ ಶ್ರೀದವಿಠಲಾಂಕಿತ ಕರ್ಜಗೀ ದಾಸಪ್ಪದಾಸರಾಯರಿಂದ ವಿರಚಿತವಾದ ಫಲಸ್ತುತಿಸಂಧಿ ಸಮಾಪ್ತ.**

ಶ್ರೀಕೃಷ್ಣಾರ್ಪಣಮಸ್ತು.



## ೩೪. ಸಂಧಿಮಾಲಾಸಂಧಿ.

ದಾಸಾರ್ಯರ ಶಿಷ್ಯರೊಬ್ಬರು ಇದನ್ನು ರಚಿಸಿರುವರು. ಏಳು ಪದ್ಯಗಳಲ್ಲಿ ಈ ಗ್ರಂಥದಲ್ಲಿರತಕ್ಕ ಮೂವತ್ತೆರಡು ಸಂಧಿಗಳ ಹೆಸರುಗಳು ಬರುತ್ತವೆ

॥ ಶ್ರೀಹರಯೇ ನಮಃ ॥

### (ಭಾಮಿನಿಷಟ್ಪದಿ.)

ರಾಗ ಮುಖಾರಿ, ಆದಿತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಹರಿಕಥಾಮೃತಸಾರ ಸಂಧಿಗ- । ಳರುಹುವೆನು ತತ್ಕೃತಮಹಾತ್ಮರ । ಚರಣಕರುಣಾಬಲವಿರಲು ಸನ್ಮಂಗಳಾಚರಣಾ ॥ ಸರಸಸಂಧಿಯು ಪೇಳ್ದ ಸುಜನರಿ- । ಘೆರುಷ ಕೊಡುವದುಯೆಂದು ಪರಮಾ- । ದರದಿ ಕರುಣಾ ಸಂಧಿ ವ್ಯಾಪ್ತಸುಸಂಧಿ ಭೋಜನದಾ ॥ ೧ ॥

ಸಂಧಿ ಸುಖದ ವಿಭೂತಿ ಸಿರಿಗೋ- । ವಿಂದನಾಜ್ಞದಿ ಪೇಳಿದರು ಆ- । ನಂದನೀಡುವ ಪಂಚಮಹ ಯಜ್ಞದ ಸುಸಂಧಿಯನು ॥ ಚಂದದಿಂದಲೆ ಪಂಚತನ್ಮಾ- । ತ್ರೆಂದು ಕರೆಸುವ ಸಂಧಿ ಪೇಳ್ದರು । ಇಂದಿರೇಶನ ಪ್ರೀತಿ ಬಡಿಸುವ ಮಾತೃಕಾಸಂಧೀ ॥ ೨ ॥

ವರ್ಣಪ್ರಕ್ರಿಯಸಂಧಿ ಸುಜನರ । ಕರ್ಣಗಳಿಗತಿಶ್ರಾವ್ಯವೆನಿಪುದು । ತೂರ್ಣದಲಿ ಸರ್ವಪ್ರತೀಕ ಧ್ಯಾನಪ್ರಕ್ರಿಯವಾ ॥ ನಿರ್ಣಯಿಸಿದರು ನಾಡಿಯನು ಸಂ- । ಪೂರ್ಣ ಗುಣನಾಮಸ್ಮರಣೆಯನು । ಸ್ವರ್ಣನಾಭಿ ಪ್ರಮುಖ ಜೀವನ ಪ್ರಕ್ರಿಯಾಸಂಧೀ ॥ ೩ ॥

ವಾಸುದೇವನ ಕರುಣದಿಂದಲಿ । ವ್ಯಾಸಸಂಧಿಯ ಪೇಳಿದರು ಜಗ- । ದೀಶನಿಂದಲಿ ದತ್ತಸ್ವಾತಂತ್ರ್ಯಾಖ್ಯ ಸಂಧಿಯನು ॥ ಲೇಸೆನಿಪ ಸ್ವಾತಂತ್ರ ವಿಭಜನ । ದಾಸರ್ಸಾರಿದರೆಲ್ಲ ಬಿಂಬೋ- । ಪಾಸನದ ಸಂಧಿಯನು ಹರಿಯ ಸ್ತೋತ್ರ ಸಂಧಿಯನು ॥ ೪ ॥

ಸುಗುಣ ತರತಮ ಭಾವಸಂಧಿಯು । ಮಿಗಿಲು ಆವೇಶಾವತಾರವ । ನಗಧರನ ಭಕ್ತಾಪರಾಧ ಸಹಿಷ್ಣು ಸಂಧಿಯನಾ । ಹಗಲು ಇರುಳೆನ್ನದಲೆ ಪಿರಿಯರು । ಬಗೆಬಗೆಯ ಶಾಸ್ತ್ರವನು ಶೋಧಿಸಿ । ಸುಗತಿಪ್ರದ ಬೃಹತ್ತಾರತಮ್ಯದ ಸಾಧನದ ಸಂಧಿ ॥ ೫ ॥

ದೇವನಂಘ್ರಿಯ ನೆನೆಯುತಲಿ ಶ್ರೀ- । ಡಾವಿಲಾಸವರೋಹ ಸಂಧಿಯು । ದೇವತಾನುಕ್ರಮಣಿಕಾ ವಿಷ್ಣ್ವೇಶಸಂಧಿಯನು ॥ ಭಾವವುಳ್ಳಣುತಾರತಮ್ಯವ । ತಾ ವಿರಚಿಸುತ ದೈತ್ಯತರತಮ । ಭಾವ ನೈವೇದ್ಯ ಪ್ರಕರಣದ ಸಂಧಿ ಪೇಳಿದರೂ ॥ ೬ ॥

ನೀರಜಾಕ್ಷನ ನೆನೆದು ಕಕ್ಷಾ । ತಾರತಮ್ಯದ ಸಂಧಿ ಪೇಳುತ । ಶ್ರೀರಮಣಗರ್ಪಿಸುತಲಿರೆ ಭೀಮೇಶವಿಟ್ಠಲನಾ ॥ ಚಾರು ಚರಣವ ನೆನೆಯುತನುದಿನ । ಧಾರುಣೀಯೊಳು ಮೆರೆದ ನಮ್ಮಯ । ಗುರುದೊರೆ ಜಗನ್ನಾಥ ದಾಸರ ನೆನೆವೆನನವರತಾ ॥ ೭ ॥

**ಅಂತು ಸಂಧಿ ೩೪ಕ್ಕೆ ಪದ ೧೦೧೯ಕ್ಕೆ ಶ್ರೀಮಜ್ಜಗನ್ನಾಥ ದಾಸರಾಯರ ಶಿಷ್ಯ ಭೀಮೇಶದಾಸವಿರಚಿತ ಸಂಧಿಮಾಲಾಸಂಧಿ ಸಮಾಪ್ತ.**

ಶ್ರೀಕೃಷ್ಣಾರ್ಪಣಮಸ್ತು.

## ೩೫. ಮನೋಹರವಿಠಲದಾಸರ ಫಲಸ್ತುತಿಸಂಧಿ.

ಶ್ರೀಜಗನ್ನಾಥದಾಸರಿಂದ ವಿರಚಿತವಾದ ಶ್ರೀಹರಿಕಥಾಮೃತಸಾರವನ್ನು ಬರೆದು ಓದುವವರು ಸಂಸಾರ ನಿವೃತ್ತಿದ್ವಾರಾ ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದುವರೆಂದು ಈ ಸಂಧಿಯಲ್ಲಿ ಹೇಳುತ್ತಾರೆ.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ಗುರುಭ್ಯೋ ನಮಃ ॥

ರಾಗ ಶಂಕರಾಭರಣ. ತ್ರಿಪುಟತಾಳ.

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮಭಗವದ್ಭಕ್ತರಿದನಾದರದಿ ಕೇಳುವುದೂ ॥ ಪಲ್ಲ ॥

ಶ್ರೀವರ ಜಗನ್ನಾಥವಿಠಲನ । ಚರಣ ಭಜಕ ನೃಸಿಂಹದಾಸನ । ವರ ಮುಖಾಂಬುಜದಿಂದ ಪರಿಮಳದಂತೆ ಪಸರಿಸಿದಾ ॥ ಹರಿಕಥಾಮೃತಸಾರ ಪುಸ್ತಕ । ಬರೆದು ಓದುತ ಕೇಳ್ವ ಸುಜನರ । ದುರಿತ ಪರಿಹರ ಮುಕ್ತಿಯವರಿಗೆ ಕರತಳಾಮಲಕಾ ॥ ೧ ॥

ಇದು ಸುಧಾಮಣಿ ಚಿಂತಿಸುವವರಿ- । ಗಿದು ಅಭೀಷ್ಟವನೀವ ಸುರತರು- । ವಿದು ಮನದ ಕಾಮಿತವ ಕರಕೊಂಬುದಕೆ ಸುರಧೇನು ॥ ಇದು ಚತುರವಿಧವಾದ ಪುರುಷಾ- । ರ್ಥದ ಸುಮಾರ್ಗವ ಭಕ್ತಿಯಿಂದಲಿ । ಸದಮಲ ಶ್ರೀಹರಿಕಥಾಮೃತಸಾರ ಕೇಳ್ವರಿಗೆ ॥ ೨ ॥

ಪತಿತಪಾವನ ಮಾಳ್ಪುದಿದು ಸಂ- । ಸೃತಿಯ ಬಾಧೆಯ ಕಳೆವದಿದು ಸಂ- । ತತ ವಿಮಲ ಸುಜ್ಞಾನ ವೈರಾಗ್ಯಾದಿ ಭಾಗ್ಯವನೂ ॥ ಅತಿಶಯದಿ ಸದ್ಭಕ್ತಿಯಿತ್ತ- । ಚ್ಯುತನ ಪಾವನ ತೋರ್ಪದಿದು ಸಂ- । ಸ್ತುತಿಸಲೊಶವೇ ಹರಿಕಥಾಮೃತಸಾರ ಸಂಸ್ಕೃತಿಯಾ ॥ ೩ ॥

ಹರಿಕಥಾಮೃತಸಾರ ಪೂರ್ವಾರ್ಧ- । ಪರದಿ ರಚಿಸಿದ ವಿಷ್ಣುದಾಸರ । ನರರಿವರು ಧಿಟವೆಂದು ಬಗೆವರು ಮೂರ್ಖರಿಳೆಯೊಳಗೆ ॥ ಸುರರಿ ಲೋಕೋದ್ಧಾರಗೋಸುಗ । ನರಹರಿಯ ಸದ್ಗುಣಗಣಂಗಳ-। ನರುಹಲು ದಿಸಿದರೆಂದು ಕೊಂಡಾಡುವರು ಕೋವಿದರು ॥ ೪ ॥

ಶರಧಿಮಥನದೊಳಂದು ಸುಧೆ ತಮ- । ಗೆರೆಯಲಾನರಸಿಂಹದಾಸರು । ಕರುಣದಿಂ ತತ್ಸುಧೆಯ ಸುಜನರಿಗುಣಿಸಬೇಕೆಂದು ॥ ಹರಿಕಥಾಮೃತಸಾರ ನಿಜಮುಖ । ವರಕಲಶದಿಂದಿತ್ತ ರಸ ಸವಿ-। ದಿರಲು ಶಾಶ್ವತ ಲೋಕದೊಳಜರಮರಣವೆನಿಸುವದು ॥ ೫ ॥

ಪರಮತತ್ವಾಸಾರ ಯೋಗೀ- । ಶ್ವರರ ಮನಕೆ ವಿಹಾರ ಸಜ್ಜನ । ನೆರವಿಗಳ ಶ್ರುತಿಗೊಪ್ಪುತಿಹ ಶೃಂಗಾರಲಂಕಾರಾ ॥ ಶರಣಜನಮಂದಾರವೆನಿಸುವ । ಹರಿಕಥಾಮೃತಸಾರ ಕೇಳ್ದರೆ। ದುರಿತ ಪಾರಾವಾರವನು ದಿಟ ಪಾರ ಕಾಂಬುವನು ॥ ೬ ॥

ರೋಗ ಭಯವೆಂದೆಂದು ಬಾರದು । ಆಗದಪಜಯ ಧುರದಿ ಬಯಸಿದ। ಭೋಗ ಶುಭಕಲ್ಯಾಣವಪ್ಪುದು ಸರ್ವಕಾಲದಲಿ ॥ ಶ್ರೀಗಿರಿಯ ಮಂದಿರನ ಕಥೆ ಲೇ- । ಸಾಗಿ ಕೇಳಲು ದಿನದಿನದಿ ಶತ। ಯಾಗಫಲ ಬಹುದಾಯುರಾರೋಗ್ಯಾದಿ ಶಿರಿಬಹುದು ॥ ೭ ॥

ವಾದಿಗಳ ಯೆದೆ ಶೂಲ ಕುಮತವ। ಭೇದಿಸುವ ಕರವಾಳ ಕಾಮ। ಕ್ರೋಧ ತರಿದಾಸಂದವೀವುದು ಹರಿಕಥಾಮೃತವು॥ ಪಾದಮಾತ್ರವ ಪಠಿಸುವಗೆ ಗಂ- । ಗಾದಿ ಸ್ನಾನ ಫಲವು ಬಹದು ಮೋ- । ಹೋದಿದವನೇ ಧನ್ಯತಮ ಪುಸ್ತಕ ಸಮಗ್ರವನು ॥ ೮ ॥

ಏನು ಧನ್ಯರು ನಮ್ಮ ಗುರು ಪವ- । ಮಾನ ಮತದೊಳಗೆಸೆವ ಚದುರ ಮ- । ಹಾನುಭಾವರು ಎನಿಪ ವೆಂಕಟ ನರಮೃಗೇಂದ್ರಾಖ್ಯಾ ॥ ಜ್ಞಾನನಿಧಿ ಮುಖದಿಂದ ಉದಿಸಿದ । ಶ್ರೀನಿವಾಸನ ಚರಿತೆ ಸುಧೆಯನು । ಪಾನಗಯ್ಯಲು ಮನದಣಿಯರೆಂದೆಂದು ಸಜ್ಜನರು ॥ ೯ ॥

ಅಂಡಜಾಧಿಪ ತುರಗನಡಿಕರ । ದಿಂಡಗಳನನವರತ ಭಜಿಸುತ । ಪಂಡಿತರಿಗಿದು ಸೊಗಸುದೋರುವದಧಮ ಮನುಜರಿಗೆ ॥ ಕೆಂಡ ಸದೃಶವು ಮುಟ್ಟಲಾಪುದೆ । ಬಂಡುಣಿಯು ಚಂಪಕ ಸುಪುಷ್ಪವ । ಕಂಡ ಓಲ್ ಕುಜನರಿಗಸಾಧ್ಯವು ಹರಿಕಥಾಮೃತವು ॥ ೧೦ ॥

ಪರಮ ತತ್ವರಹಸ್ಯವಿದನು- । ಚ್ಚರಿಸಲು ಬರೆದ ವೈಷ್ಣವರಿಗಿದು । ಕರಕರಿಯ ಸಂಸಾರವೆಂಬಬ್ಧಿಯೊಳು ಮುಣುಗಿರುವಾ ॥ ನರರಿಗೊರೆಯಲು ಬಾರದೆಂದಿಗು । ಕರಣಶುದ್ಧಿಗಳಿಂದ ಚರಿಸುವ । ಹರಿಯ ದಾಸೋತ್ತಮರಿಗರುಹಲು ಸಫಲವಾಗುವದು ॥ ೧೧ ॥

ಸ್ನಾನ ಸಂಧ್ಯಾವಂದನೇತರಕೆ । ಮೌನ ಜಪತಪ ಹೋಮವೇತಕೆ । ದಾನ ಕಾಯಕ್ಲೇಶ ತೀರ್ಥಕ್ಷೇತ್ರ ಯಾತ್ರೆಗಳಾ ॥ ತಾನೆಸಗಲೇಕಮಲ ಭಕ್ತಿ । ಜ್ಞಾನಪೂರ್ವಕ ಹರಿಕಥೆಯ ಸ- । ನ್ಮಾನದಿಂ ಕೇಳಿವರೆ ಸರ್ವವು ಸಿದ್ಧಿಯಾಗುವದು ॥ ೧೨ ॥

ಹರಿಕಥಾಮೃತಸಾರ ಪುಸ್ತಕ । ಸುರಮಹೀರುಹ ಅದಕೆ ಶಾಖೆಗ- । ಳೆರಡು ನಾಕೆರಡೆಂಬ ಸಂಧಿಗಳಿದಕೆ ಮುನ್ನೂರು ॥ ಎರಡು ಅರುವತ್ತೆಂಟು ಪದಗಳೆ । ವರಮಧುರ ಫಲವರುಣವಾಗಲು । ಹರುಷದಿಂ ಸವಿಸವಿದು ರುಚಿಗಳ ಪೊಗಳ್ವರೇ ಬುಧರು ॥ ೧೩ ॥

ದಶಸುಸಂಧಿಯೊಳಿಪ್ಪ ಶ್ಲೋಕಗ- । ಳೆಸೆವ ನವರತ್ನಾದಿ ಮಣಿಗಳ । ಪ್ರಸರ ಮಣಿಕಜ್ಞಾನ ಭಕ್ತಿಗಳೆಂಬ ಕರದಿಂದಾ ॥ ಎಸಗಿ ನವರತ್ನಗಳ ಮೂಟಿಗ- । ಳಸಮ ಶ್ರೀಜಗನಾಥವಿಠಲನ । ಬಿಸಜ ಪಾದಕ್ಕಿಡಲು ಸೇವೆಯನೊಡನೆ ಕೈಕೊಂಬ ॥ ೧೪ ॥

ನವರಸಾಲಂಕಾರ ಶಾಸ್ತ್ರವ । ವಿವರಿಸಲು ಬಹುದತಿಚಮತ್ಕೃತಿ । ಕವಿತವನು ವರ್ಣಿಸಲು ಬಹುದೀ ಶ್ರೀಮನೋಹರನಾ ॥ ಸ್ತವನ ಗುಣಗಳ ತತ್ವಸಾರವ । ಅವನಿ ಜನರಿಗೆ ಪೇಳಲೊಶವೇ । ದಿವಿಭವರಿಗಲ್ಲದಲೆ ಹರಿಯ ಕಥಾಮೃತಸ್ನಾನ ॥ ೧೫ ॥

ಶ್ರೀಮನೋಹರ ವಿಠಲದಾಸನ । ಪ್ರೇಮದಿಂ ಕರವಿಡಿದ ಗುಣ ನಿ- । ಸ್ಸೀಮ ಶ್ರೀಜಗನ್ನಾಥವಿಠಲನ ಭಜಕರೆಂದೆನಿಪಾ ॥ ಆ ಮಹಾತ್ಮರ ಜ್ಞಾನವಿದ್ಯೆಯ । ನಾಮವನುದಿನ ಸ್ಮರಿಸಲಿವರಿಗೆ । ಕಾಮಿತಾರ್ಥಗಳು ದೊರೆವವು ಸಂದೇಹವೇನಿದಕೆ ॥ ೧೬ ॥

ಇರುಳುಹಗಲರುವತ್ತು ಘಳಿಗೆಯ । ಪರಿಪರಿಯ ದಿವಸದಲಿ ಸಂತತ । ನಿರಸತರ ಸಂಸಾರವೆಂಬಬ್ಧಿಯೊಳು ಮುಳಗಿರದೆ ॥ ಅರೆಘಳಿಗೆ ಸದ್ಭಕ್ತಿಯಲಿ ಶ್ರೀ । ಹರಿಕಥಾಮೃತಸಾರ ಸವಿದರೆ । ಶಿರಿಮನೋಹರ ವಿಠಲನಡಿದಾವರೆಯ ಸೇರುವರು ॥ ೧೭ ॥

ಸಂಧಿ೩೫ಕ್ಕೆ ಪದ೧೦೩೬ಕ್ಕೆ ಮನೋಹರವಿಠಲದಾಸರಫಲಸ್ತುತಿಸಂಧಿ ಸಮಾಪ್ತ.

ಶ್ರೀಗುರ್ವಂತರ್ಗತಮಧ್ವೇಶಾರ್ಪಣಮಸ್ತು.



## ೩೬. ನಿರ್ಗುಣಸಾರಸಂಧಿ.

ಶ್ರೀಹರಿಯು ತಾನು ಕರ್ಮಗಳಿಂದ ಲಿಪ್ತನಾಗದೇ ಸ್ವತಂತ್ರನಾಗಿ ಸಕಲ ಚೇತನರೊಳಗಿದ್ದು ಅವರವರ ಅನಾದಿ ಕರ್ಮಾನುಸಾರವಾಗಿ ಕರ್ಮಗಳನ್ನು ಮಾಡಿಸುತ್ತಾ ಅವರವರ ಯೋಗ್ಯತಾನುಸಾರವಾಗಿ ಮೋಕ್ಷಾದಿ ಪುರುಷಾರ್ಥಗಳನ್ನು ಕೊಡುತ್ತಿರುವನೆಂದು ಈ ಸಂಧಿಯಲ್ಲಿ ವರ್ಣಿಸಲ್ಪಡುವದು.



॥ ಶ್ರೀಗುರುಭ್ಯೋ ನಮಃ ॥

**(ವಾ ರ್ಧಿ ಕ ಷ ಟ್ಪ ದಿ .)**

ಶ್ರೀರಾಗ, ಅಟತಾಳ.

ಶ್ರೀರಮಣಿ ಕುಚಕುಂಕುಮಾಂಕಿತದ ಸೊಬಗಿನಿಂ । ವಾರಿಜಭವೇರರುಚಿ ತುತಿಸುತಿಹ ಭಾಗ್ಯದಿಂ । ಚಾರುತರ ವಾಣಿ ಭಾರತಿ ಫಣಿಪವಿಹಗಪತಿ ಗಿರಿಜಾರಮಣ ಮುಖ್ಯರಾ ॥ ಭೂರಿ ವಂದನೆಯ ಸಂಪದದಿಂದ ಮೆರೆಯುತಿಹೊ । ದಾರ ಜ್ಞಾನಾನಂದಗುಣಪೂರ್ಣ ವ್ಯಾಪಿ ಜಗ। ಧಾರ ಗುರುವರ ಶ್ರೀನಿವಾಸವಿಟ್ಠಲ ಪೊರೆವ ತನಗೆ ತಾನೇ ಧರೆಯೊಳು ॥ ೧ ॥

ಮುನ್ನ ಗುರುವರ ಜಗನ್ನಾಥವಿಟ್ಠಲ ಪೇಳ್ದ । ಸನ್ನುತ ಕವಿತ ವೆನಿಪ ಹರಿಕಥಾಮೃತಸಾರ । ತನ್ಮಧ್ಯದೊಳ್ತೋರಿತೋರದವೊಲಿಪ್ಪ ನಿರ್ಗುಣಸಾರ ಸಂಗತಿಯನೂ ॥ ಇನ್ನು ಜಗದೊಳಗಿಪ್ಪ ಸರ್ವಜೀವಾಂತಸ್ಥ । ತನ್ನ ಹರಿ ಕೇಳಿ ತೋಷಿಸಲೆಂದು ಧರೆಯೊಳ- । ತ್ಯುನ್ನತವಧಿಕ ಸರ್ವಜೀವನಿಯಮಕನಲ್ಲಿ ನಿಂದು ನುಡಿವನು ಧರೆಯೊಳು ॥ ೨ ॥

ಅನಭಿಮತಕರ್ಮ ಪ್ರವಾಹದೊಳ್ ಜೀವತತಿ- । ಯನುಪಮನ ವಶವಾಗಿಯಿರುವ ಕಾಲಗಳಲ್ಲಿ । ಸಲೆ ಜೀವರೆಲ್ಲ ನಿಷ್ಕ್ರಿಯ ಚೇತನಾಭಾಸ ರೆಂದು ಕರೆಸುವರು ಬಳಿಕಾ ॥ ಅನುಪಮ ಚರಿತ್ರಹರಿ ಪಾಲಿಸುವನನವರತ । ತನಮಡದಿಯಧಿದೈವವೆನಿಪ ಜಡರೂಪದಾ । ತನುವಿತ್ತು ಜೀವ ಕೃತಕರ್ಮಗಳನಾಚರಿಸೆ ಸುಕೃತ ದುಷ್ಕೃತಗಳುಂಟೆ ॥ ೩ ॥

ತನ್ನ ಮನಬಂದ ತೆರದಂತೆ ಜೀವರೊಳಿದ್ದು । ಭಿನ್ನಗುಣರೂಪ ಕ್ರಿಯಾದಿಗಳ ತೋರುವಂ । ಸನ್ನುತ ಸುಮಾರ್ಗ ದುರ್ಮಾರ್ಗ ಮಧ್ಯಮವೆಂದು ಕರೆಸುತಿಪ್ಪಂ ಧರೆಯೊಳು ॥ ತನ್ನ ಮನಬಂದ ತಾಮಸವ ಸ್ವೀಕರಿಸುವಂ । ತನ್ನ ಮತವಲ್ಲದಿಹ ಸಾತ್ವಿಕವನನುಕರಿಪ । ತನ್ನ ಮನವಾರೆ ರಾಜಸವೆಂದು ಕರೆದು ನಡೆವಂ ತಾನೆ ರಾಜಸದೊಳು ॥ ೪ ॥

ಬಲು ಜನ್ಮವೀಯಲೋಸುಗ ಕೆಲವರಲಿ ನಿಂತು । ತಿಳಿಯದವನೋಪಾದಿ ತನ್ನ ತಾ ಮರೆದಿಹಂ । ಸಲೆ ಜನ್ಮಗಣನೆ ತೀರಿದ ಬಳಿಕ ತನ್ನ ತಾನೊಳಕೊಂಬ ಚೇತನದೊಳು । ತಿಳಿದು ತನ್ನಯ ಸೇವೆ ತಾನೆ ಮಾಡುತ ನಿತ್ಯ- । ವಿಳೆಯ ಮೇಲಿದ್ದ ಜೀವರೊಳಿದ್ದು ತಾ ಪೊಗಳಿ । ಬಲು ಪುಣ್ಯವಂತನಿವನೆಂದು ಸಂತಸಬಟ್ಟು ತನಗೆ ತಾನೇ ವಲಿವನು ॥ ೫ ॥

ವೇಧ ಮೊದಲಾದವರ ಸಾತ್ವಿಕರೆನಿಸಲೆಳಸಿ । ಸಾಧು ಶಾಂತತ್ವ ಸ್ವರೂಪದಿಂದಿರುತಿಪ್ಪ । ಕ್ರೋಧಿ ಶಂಬರದೈತ್ಯ ಕಲಿಮುಖ್ಯ ದಾನವರೊಳಿಪ್ಪನತಿಕೋಪದಿಂದಾ ॥ ಈ ವಸುಂಧರೆಯೊಳಗೆ ಕೋಪಶಾಂತಿಗಳೆರಡು । ಆವ ದೇಶದೊಳಾದೊಡಂ ಕೂಡಿ ನಡೆದಪುದೆ । ದೇವ ಮಾಡುವ ಕೃತ್ಯಗಳನು ನಿಂದಿಪರುಂಟೆ ಆವಾವ ಲೋಕಗಳೊಳು ॥ ೬ ॥

ದೇಹಸ್ಥನಾದ ಜೀವನು ಕಳವನಾಚರಿಸೆ । ದೇಹಕ್ಕೆ ನಿಗಳಬಂಧ
ನವಪ್ಪ ತೆರದಂತೆ । ದೇಹಿನಿಕರದೊಳು ಹರಿ ತಾ ನಿಂತು ಚೇಷ್ಟೆಯಂ
ಮಾಡಲವರದರ ಫಲಕೆ ॥ ಈ ದೇವವಂದ್ಯ ಸುಖದುಃಖಭೋಕ್ತನು
ಎಂದೊಡಾ । ದೇವಗೇನಹುದು ಕುಂದುಕೊರತೆಗಳಿಂತು । ಮಾಧವನೆ
ಆಚರಿಸಿ ನುಡಿದು ಸಂತಸಬಡುವ ಸಕಲ ಪ್ರಾಣಿಗಳೊಳಿದ್ದು ॥ ೭ ॥

ಭೂಸುರರ ದೇಹದೊಳಗಿರುವ ಜೀವನೊಳಿಪ್ಪ । ವಾಸುದೇವನೆ
ವಿಪ್ರನೆಂದು ತಾ ಕರೆಸುವಂ । ಈ ಸಮಸ್ತ ಪುರಾಣ ವೇದಶಾಸ್ತ್ರೋಕ್ತ
ಕರ್ಮಗಳನಾಚರಿಸುತಿಹನು ॥ ಸ್ವೋಚಿತ ಸುಮಾರ್ಗಗಳ ನಾಚರಿಸ
ಬೇಕೆಂದು । ವಾಚಿಸುತ ಮೂರುವರ್ಣದ ಜೀವರೊಳಗಿಪ್ಪ । ಕೀಚಕಾರಿ
ಪ್ರಿಯಗೆ ಸೂಚಿಸುತ ನೆಲಸಿಹಂ ಆಸೆಕ್ಲೇಶಕೆ ಸಿಲುಕದ ॥ ೮ ॥

ಮಾನವಪದೇಹಸ್ಥನಾದ ಜೀವರೊಳಿದ್ದು । ತಾನೆ ಕ್ಷತ್ರಿಯನೆಂದು
ಕರೆಸುತನುದಿನ ವನಜ । ನಾಭ ಸಂಕರ್ಷಣನೆ ದುಷ್ಟನಿಗ್ರಹಶಿಷ್ಟ ಪರಿ
ಪಾಲನೆಯನು ಮಾಡಿ ॥ ಸಾನುರಾಗದಿ ಸಕಲವರ್ಣಾಶ್ರಮಾಚಾರ ।
ಹೀನವಾಗದ ತೆರದಿ ಪಾಲಿಸುತಲನುದಿನದಿ । ತಾನೆ ಪೂಜಿಪನು ವಿಪ್ರಸ್ಥ
ನಾಗಿಹ ವಾಸುದೇವನೇ ವಿನಯದಿಂದಾ ॥ ೯ ॥

ಈ ನಳಿನಜಾಂಡದೊಳಗುಳ್ಳ ವೈಶ್ಯರ ಕಾಯ । ಜಾಲಗಳೊಳಿಪ್ಪ
ಚೇತನನಿಕರದೊಳು ನಿಂತು । ವಾಣಿಜ್ಯವೃತ್ತಿಗಳ ಸೇವಾದಿಕೃತ್ಯಗಳನಾ
ಚರಿಪ ಪ್ರದ್ಯುಮ್ನನು॥ ತಾನೆ ಪೂಜಿತಪೂಜ್ಯನಾದೊಡಂ ಬೇಸರದೆ। ತಾನೆ
ಪೂಜಿಪ ತಾನೆ ಇಟ್ಟಿಹಾ ಜ್ಞಾನಮಂ । ಸಾನುರಾಗದಿ ಜೀವತತಿಗಿತ್ತು
ಅವರ ಸ್ವಭಾವಯೆನಿಸುವನು ಕರುಣಿ ॥ ೧೦ ॥

ತಾವೆ ಬಿತ್ತುವ ಬೆಳವನಿತ್ತ ಧಾನ್ಯಗಳ ತಾ । ಪೋವಿ ಅವನಿಪತಿ
ಮೊದಲಾದವರ್ಗೀಯುತಿಹ । ಆವಿ ಅಜ ವೃಷಭಮೊದಲಾದಜೀವನ
ತತಿಯ ಸಲಹುವಂ ಶೂದ್ರನೆನಿಸಿ ॥ ಈ ವನಜ ಗರ್ಭಾಂಡದೊಳಗುಳ್ಳ
ಜೀವರೊಳು। ಭಾವಿತನು ಅನಿರುದ್ಧನಾಮದಿಂದಲೆ ಕರೆಸಿ। ಈವಿಧದಿ ಚತು
ಷ್ಪಾತು ತಾನೆನಿಸಿಕೊಳುತಿಪ್ಪ ಮಾವಿಧಿಪ್ರಮುಖಸ್ತುತ್ಯಾ ॥ ೧೧ ॥

ಗೋವುಗಳೊಳಿರುತಿಪ್ಪನುದ್ಗೀಥನಾಮಕಂ । ಆವಿ ಅಜಗಳೊಳಿ ಹನು ಪ್ರಸ್ತಾವಹೀಂಕಾರ । ವಾಹನಾಸ್ಪದವಾದ ಹಯುಗಳೊಳಗಿರುತಿಪ್ಪ ಪ್ರತಿಹಾರನೆನಿಸಿಕೊಂಡೂ॥ ಜೀವನಪ್ರದ ನಿಧನನಾಮ ಮನುಜರೊಳಿದ್ದು। ದೇವದಾನವರೆನಿಸಿಪ ಸಕಲ ಚೇತನರುಗಳ । ಯಾವದೇಂದ್ರಿಯ ಭಾಗ್ಯ ರಸಗಳನು ಸ್ವೀಕರಿಪ ಸ್ಥೂಲಭುಕು ವಿಶ್ವಾಖ್ಯನು ॥ ೧೨ ॥

ಕೇಶಸಾಸಿರ ಭಾಗಗೈಸಲೆನಿತಿಹ ಜೀವ । ನೀಸು ದೃಢತರವಾಗ ದವನು ಭುಂಜಿಸನೆನಲಿ । ವಾಸವಾರ್ಚಿತಪಾದ ಶ್ರೀಶನಗದಿಹನೆ ತನ್ನಯ ಕೃತ್ಯ ತಾನೆ ನೆನೆದೂ॥ ಸೂಸಿ ಕರುಣವ ತಾನು ಕೈಪಿಡಿದ ಚೇತ ನನೊ । ಲೇಸುಕಾಲಗಳಾದೊಡಂ ಜೀವಕೃತವೆನಿಸ । ಘಾಸಿಗೊಳಿಸಲು ಜಗದ ಜೀವರೊಳಗಿದ್ದಾಡಿ ಜನ್ಮಮೃತಿಗಳ ಕೊಡುವನು ॥ ೧೩ ॥

ಜೀವರಂತರ್ಯಾಮಿಯಾಗಿಪ್ಪ ಹರಿ ಲಿಂಗ। ದೇಹದಭಿಮಾನಿ ಲಕು ಮಿಯೊಳಿರುವ ತನಗೆ ತಾ । ನೋವಿ ಪ್ರೇರಿಸೆ ಬಳಿಕ ಲಿಂಗಸ್ಥನಾದ ವಾರಿಜಭವಾಂತರ್ಯಾಮಿಗೆ ॥ ಜೀವ ಸ್ವಾವರಣ ಲಿಂಗಾಭಿಮಾನಿ ಯೊಳಿದ್ದು । ಮಾವಿನುತ ಹರಿ ತನಗೆ ತಾನೆ ಪ್ರೇರಿಸಲಹವು । ತೀವಿ ಮುಂದಿರುವ ಅನಿರುದ್ಧ ದೇಹದೊಳಿಪ್ಪ ಜೀವತತಿಯೊಳು ನೆಲಸಿಹ॥ ೧೪॥

ಭಾವಿಶೇಷಪದಾರ್ಹ ಮುಖ್ಯ ದೇವಾರ್ಚಿತ । ಶ್ರೀವಿನುತ ಹರಿಗೆ ಪ್ರೇರಣೆ ಸ್ಥೂಲದೊಳು ಹೊಳೆವ । ದೇವದಾನವ ಸೇವ್ಯ ವಿಶ್ವಾಖ್ಯಗ ಹುದು ಅನಿರುದ್ಧ ದೇಹಸ್ಥನಾಗಿ ॥ ಎಣಿಸೆ ವಿಶ್ವಾಖ್ಯನಾಚರಿಪ ತನ್ನಯ ಆಜ್ಞೆ । ತನಗೆ ತಾನೇ ವಿಚಾರದಲೆ ಸತ್ಯಸಂಕಲ್ಪ-। ದನುಸಾರ ಸ್ಥೂಲದೊಳ ಗಿದ್ದು ತದ್ರೂಪ ತನ್ನಾಮದಿಂ ಕರೆಸಿ ಕೊಂಡೂ ॥ ೧೫ ॥

ಈವಿಧಾಧ್ಯಾತ್ಮದೊಳಗೀವ ಪ್ರೇರಕನಾಗಿ । ಆವ ಕರ್ಮವ ಈಶನಾ ಜ್ಞೆಯಿಂದಾಚರಿಪ । ಆವ ಕರ್ಮವ ಮಾಡಲಿರ್ದಪದು ಚೈತನ್ಯ ಚೇತ ನಾಭಾಸಕಂಗೆ ॥ ಕೋವಿದೋತ್ತಮರೆನಿಸಿ ನ್ಯಾಯಬಾಹಿರರೆನಿಸಿ । ಆವ ದೊಂದರಿಯದಜ್ಞಾನಮಿಶ್ರರು ಯೆನಿಸಿ । ಈವಿಧದಿ ಜೀವರನು ಮೂರು ಗುಣದೊಳಗಿಟ್ಟು ಸಲಹುವಂ ಕೃತಿರಮಣನು ॥ ೧೬ ॥

ಜೀವರಂತರ್ಯಾಮಿಯಾಗಿದ್ದು ಪ್ರೇರಿಸುವ । ಪಾವನನೆನಿಪ್ಪ ಪ್ರಾಣನೊಳಿದ್ದು ಸಾಕ್ಷಿಯಹ । ವ್ಯಾಪಿ ಕಾರ್ಯಗಳ ನಡೆಸುವ ಸ್ಥೂಲ ದೊಳಗಿದ್ದು ವಿಶ್ವಾಖ್ಯನೆನಿಸಿಕೊಂಡು । ಯಾವದಿಂದ್ರಿಯದ ವ್ಯಾಪಾರ ಗಳ ನಡೆಸುವರೆ । ಆವಕಾಲಕು ಜೀವತತಿಗೆ ಸ್ವಾಧೀನವಿಲ್ಲ । ಪಾವನನೆ ನಿಪ್ಪ ಹರಿಯಿಟ್ಟತೆರನಂತಿರುವದೇ ಜೀವ ಧರ್ಮಕರ್ಮ ॥ ೧೭ ॥

ಜೀವ ಜೀವಗೆ ಬಿಂಬನೆನಿಸಿಕೊಂಬುವದುಂಟೆ। ಪಾವನನೆನಿಸಿಕೊಂ ಡು ಹರಿತಾನೆ ನಿಂತಖಿಳ। ಜೀವರೊಳು ಪ್ರತ್ಯೇಕವಾಗಿ ಕರೆಸುವ ಬಿಂಬಪ್ರ ತಿಬಿಂಬನಾಮದಿಂದಾ ॥ ಜೀವನಿಕರಕೆ ಯೋಗ್ಯತೆಗಳಿಲ್ಲ ವಿಶ್ವಜಗ-। ತೀವ ಲಯ ಜೀವರೊಳಗಿದ್ದು ಕರ್ಮವ ಮಾಡಿ । ತಾನೆ ಪೇಳುವಯೋಗಧಿ ಷ್ಠಾನ ನೀಚರೆಂದಾವಾವಕಾಲಗಳೊಳು ॥ ೧೮ ॥

ಆದಿಯೊಳು ಸೃಷ್ಟಿಕಾಲದಿ ಪ್ರಕೃತಿಯೊಳು ನಿಂತು । ತಾ ದಯದಿ ಮೂರು ಗುಣಗಳ ಸೃಜಿಸಿ ಮೇದಿನಿಯ । ಮೇಲೆ ಸಾತ್ವಿಕ ರಜೋ ತಾಮ ಸಗಳೆಂದು ಪೆಸರಿಡೆ ಸತ್ಯಸಂಕಲ್ಪಕಾ ॥ ಈದೇವದೇವಗೊದಗಿತು ತವ ಸುಸಾರ ಬಳಿ-। ಕೀಚರಾಚರ ಜೀವತತಿಯ ಗುಣದೊಳಗಿಟ್ಟು। ಹಾದಿತಪ್ಪ ಲುಗೊಡದೆ ಕರ್ಮಾನುಸಾರ ನಡೆವನು ಸತ್ಯಸಂಕಲ್ಪನು ॥ ೧೯ ॥

ತಾನೆ ಕಾರ್ಯವ ಮಾಡಿ ಪಾಪವೆಂದರುಪುವಂ । ತಾನೆ ಕೃತ್ಯ ನಡೆಸಿ ಸುಕೃತವೆಂದುಸುರಿದಪ । ತಾನರಿಯದವನ ತೆರದೊಳಗಿದ್ದು ಮಿಶ್ರ ನೆಂದಾಡುವಂ ಜೀವತತಿಯಾ ॥ ತಾನೆ ತನ್ನಯ ಮನವಸಿತ್ತು ಜೀವರ ಪೊರೆವ । ತಾನೆ ಮತಗೊಡದೆ ಜೀವರ ಮೇಲೆ ಕೋಪಿಸುವ । ತಾನುದಾ ಸಿನಗೈದವನ ತೆರದೊಳಿರುತ ಹರಿ ಗುಣಯುಕ್ತ ಚೇತನರೊಳು ॥ ೨೦ ॥

ಜೀವರಿಗೆ ಋಣರೂಪವಾದ ಗುಣವನೆ ಸೃಜಿಸಿ। ಮಾವಿನುತ ತನ್ನ ಆಜ್ಞದಿ ಜೀವರಿಗೆ ಹೊರಿಸಿ । ಈವಿಧದ ಯೆರಡೊಂದು ಗುಣವ ಋಣ ಕೆಡೆಯಾಗಿಯಿರಲೋಸುಗವೆ ಅವರೊಳು ॥ ಜೀವಕತೃತ್ವ ಬಂಧಕ ಶಕುತಿ ರೂಪಾಂತು । ಪಾವನನೆನಿಸಿಕೊಂಡು ಲಿಪ್ತನಾಗದೆ ನಿಂತು। ಆವಾವ ಪಕ್ವ ಕಾಲಗಳರಿತು ಗುಣಋಣವ ಸಾವಧಾನದಿ ತಿದ್ದುವಾ ॥ ೨೧ ॥

ಆವ ಗುಣಗುಣ ಪಕ್ಷಕಾಲ ಬಲ್ಲನೊ ಜೀವ । ಆವ ಕರ್ಮಗಳ ಮರ್ಮದ ಫಲವ ನೆರೆಬಲ್ಲ । ಆವ ದುಷ್ಕೃತಸುಕೃತ ಫಲ ಉಂಡ ಪ್ರಜ್ಞಾವಿಶೇಷವಿಪ್ಪದೊ ಜನುಮದೊಳ್ ॥ ತೀವಿಕೊಂಡಿಹ ಜನ್ಮಗುಣಗುಣ ಮಹಾಭಯವು । ಠಾವರಿತು ಜೀವರನು ಪಾರಗಾಣಿಸೆ ಮುಕ್ತ । ಶ್ರೀಯುರ ಪನೊಲಿಯುದಲೆ ವಲಿಸಬಲ್ಲವರುಂಟೆ ಜಡಚೇತನರ ಮಧ್ಯದಿ ॥ ೨೨ ॥

ನೋವೊಂದು ತನಗಾಗೆ ಪರಿಹರಿಸಿಕೊಳಲರಿಯ । ಪಾವಗಿದ ವಿಷವ ನಿರ್ವಹಿಸಿಕೊಳಲಂತರಿಯ । ಜೀವನು ರಮಾಬ್ರಹ್ಮರುದ್ರಾದ್ಯಚಿಂತ್ಯ ಸದ್ಗುಣಪೂರ್ಣ ನರಹರಿಯನೂ ॥ ತಾ ವಲಿಸಿ ಮೆಚ್ಚಿಸಿ ಭವಾರ್ಣವವ ದಾಟುವದಿ । ದಾವಕಾಲಕೂ ಸಾಧ್ಯವಹುದೆ ಅನಸೂಯೆಯಿಂ । ತಾ ವಲಿದು ಅನಿಮಿತ್ತ ಪೊರೆವನೆನಲವನೆ ನಿರ್ಗುಣಜೀವನೀಧರೆಯೊಳು ॥ ೨೩ ॥

ಈವಿಧದ ಭಾವನೆಯು ಆವ ಜೀವನೊಳಿದ್ದು । ತಾನೋವಿ ಕರುಣದಿಂ ಪಾಳ್ಪನೋ ಶಿರಿರಮಣ । ಭೂವಲಯದೊಳಗೆ ತಚ್ಚೇತನನ ಗುಣದೋಷಗಳನು ತಾ ಲೆಕ್ಕಿಸದಲೆ ॥ ಭಾವಿ ಆಗಾಮಿ ಸಂಚಿತಗಳನು ಕಳೆದು ಭವ । ನೋವನೀಯದೆ ತನ್ನ ಭಕ್ತಿಸಂಪದವಿತ್ತು । ಈವಸುಂಧರೆಯೊಳಗೆ ಸೃಷ್ಟಿಸದೆ ಕಾವ ತನ್ನೊಳಗಿಟ್ಟು ಸಗುಣಿ ಕರುಣಿ ॥ ೨೪ ॥

ತಾನೆ ಕೋಪಿಸಿ ತಾನೆ ಶಾಂತನಾದಪನೊಮ್ಮೆ । ತಾನೆ ಬೈವಂ ತಾನೆ ದಯಗೈವನೊಮ್ಮೊಮ್ಮೆ । ತಾನೆ ನರಕವನಿತ್ತು ಮರಳಿ ದಯವಿಟ್ಟು ಮೋಕ್ಷವನೀವ ಭಕ್ತಗಣಕೆ ॥ ಈವಿಧದ ಕೋಪಶಾಂತಿಗಳಿಗಾಸ್ಪದವಾದ । ಜೀವಕೃತ್ಯಗಳ ತಾನಾಚರಿಸಿ ನಡೆಯುತಿಹ । ದೇವ ಗುರು ಶ್ರೀನಿವಾಸವಿಠಲಗೆ ವೈಷಮ್ಯವುಂಟೆ ಘನ ಚಿನುಮಯಂಗೆ ॥ ೨೫ ॥

ಅಂತು ಸಂಧಿ ೩೬ಕ್ಕೆ ಪದ ೧೦೬೧ಕ್ಕೆ ನಿರ್ಗುಣಸಾರಸಂಧಿ ಸಮಾಪ್ತ.

ಶ್ರೀಗುರ್ವಂತರ್ಗತಮಧ್ವೇಶಾರ್ಪಣಮಸ್ತು.

ಶ್ರೀಕೃಷ್ಣಾರ್ಪಣಮಸ್ತು.

## ಶ್ರೀಮಜ್ಜಗನ್ನಾಥ ದಾಸರಾಯರ ಚರಿತ್ರೆ.

ಈ ಪುಸ್ತಕದಲ್ಲಿ ಈ ಮಹನೀಯರ ಚಿತ್ತಾಕರ್ಷಕವಾದ ಅತ್ಯದ್ಭುತ ಮಹಿಮೆಗಳು ಲಲಿತವಾಗಿಯೂ, ಸರಳವಾಗಿಯೂ ಇರುವ ಭಾಷೆಯಲ್ಲಿ ವರ್ಣಿಸಲ್ಪಟ್ಟಿವೆ. ಈ ಚರಿತ್ರೆಯನ್ನು ಓದುವಮಾತ್ರದಿಂದ ಎಂಥವರಿಗೂ ದಾಸವರ್ಯರಲ್ಲಿ ಅಚಲವಾದ ಭಕ್ತಿಯುಂಟಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಬೆಲೆ: ೦—೪—೦.

## ವಿಜಯದಾಸರ ಸುಳಾದಿಗಳು.

ಈ ಗ್ರಂಥವು ಕನ್ನಡಿಗರಿಗೆ ಕರ್ಣಾನಂದಕರವಾಗಿ ವೇದಾಂತ ತತ್ವವನ್ನು ತಿಳಿಯಲು ಅತ್ಯುಪಯುಕ್ತವಾಗಿರುವುದು.

ಬೆಲೆ: ೧—೦—೦.

## ಶ್ರೀಪಾದರಾಯರ ಶ್ರೀವ್ಯಾಸರಾಯರ ಕೀರ್ತನೆಗಳು ಮತ್ತು ಸುಳಾದಿಗಳು.

ಈ ಗ್ರಂಥವು ಕನ್ನಡನಾಡಿಗರ ದಾಸಕೂಟದ ಆದಿಪುರುಷರಾದ ಶ್ರೀಪಾದರಾಯರಿಂದಲೂ, ಅವರ ಶಿಷ್ಯರೆನಿಸಿದ ಶ್ರೀವ್ಯಾಸರಾಯ ಮಹಾಮುನಿಗಳಿಂದಲೂ, ವಿರಚಿತಗಳಾದ ತತ್ವಬೋಧಕ ಸುಂದರಕೀರ್ತನೆಗಳಿಂದ ತುಂಬಿರುವುದು. ಬೆಲೆ: ೦—೬—೦.

## ಶ್ರೀಮನ್ಮಧ್ವಾಚಾರ್ಯರವರ ಸಂಕ್ಷಿಪ್ತಚರಿತ್ರೆ.

ಈ ಚಿಕ್ಕ ಪುಸ್ತಕವು ಅತಿ ಸುರಸವಾಗಿ ನೂತನಕ್ರಮಕ್ಕೊಳಪಟ್ಟು ವಾಚಕರಿಗೆ ಹೃದಯಾನಂದಕರವಾಗುವಂತೆ ವಿರಚಿತವಾಗಿ ಪ್ರಕಟಿಸಲ್ಪಟ್ಟಿದೆ. ಬೆಲೆ: ೦—೨—೦.

ಪಾವಂಜೆ ಗುರುರಾವ್,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ, **ಉಡುಪಿ**